**COMMERCIAL TAXES DEPARTMENT**

**Office of the Commissioner of Commercial Taxes in Karnataka, Bangalore**

**Notification No. KSA.CR.186/04-05, Dated: 20th October 2004**

In exercise of the powers conferred on me by the proviso to sub-section (1) of section 19-A of KST Act, 1957 (Karnataka Act 25 of 1957). I Ashok Kumar C. Manoli, Commissioner of Commercial Taxes, Karnataka do hereby notify that the following industrial units who have engaged other dealers to execute works contracts for them shall make deduction of tax at source as provided under sub-section (1) of Section 19-A of KST Act, 1957 with immediate effect and upto 31-3-2005.

| Sl. No. | Name of the Mega Unit | R.C. Number |
|---|---|---|
| 1. | M/s Jindal Vijayanagar Steel Ltd., Toranagallu | 80206712<br>80256715 |
| 2. | M/s Jindal Praxair Oxygen Company Ltd., Toranagallu. | 80207248<br>80257240 |
| 3. | M/s Jindal Tractebel Power Company Ltd., Toranagallu | 82922603<br>82972606 |
| 4. | M/s. Euro Ikon & Steel Pvt Ltd., C/o JVSL Site Toranagallu | 82926580<br>82976582 |

**ASHOK KUMAR .C. MANOLI**

P.R. 1522 Commissioner of Commercial Taxes, (Karnataka), Bangalore

**ಅಧಿಕೃತ ಅಧಿಕಾರಿಗಳು ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕೋಲಾರ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಎ4:ಎಫ್.ಓ.ಸಿ:ಸಿಆರ್:38:2004-05**

**ಕರ್ನಾಟಕ ಅರಣ್ಯ ಕಾಯಿದೆ 1963ರ 71 'ಬಿ' ಅನ್ವಯ ಕಾರಣ ಕೇಳಿ ಸೂಚನೆ**

**ವಿಷಯ:** ಬಂಗಾರುಪೇಟೆ ಆರಕ್ಷಕ ಠಾಣೆಯವರು (ಅರಣ್ಯ ಅಪರಾಧ) ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ವಶಪಡಿಸಿಕೊಂಡಿರುವ ಟಿ.ವಿ.ಎಸ್. ಎಕ್ಸೆಲ್ ಸಂಖ್ಯೆ: ಕೆಎ-08-ಹೆಚ್-7370 ಅನ್ನು ಹಾಜರುಪಡಿಸಿರುವ ಬಗ್ಗೆ.

ಆರಕ್ಷಕ ಉಪ ನಿರೀಕ್ಷಕರು (ಅಪರಾಧ) ಬಂಗಾರುಪೇಟೆ ಇವರು ದಿನಾಂಕ: 17/18.03.2004 ರಂದು ರಾತ್ರಿ ಸುಮಾರು 3.40 ರ ಸಮಯದಲ್ಲಿ ಬಂಗಾರುಪೇಟೆ ಬಸ್ಸು ನಿಲ್ದಾಣದಲ್ಲಿ ಗಸ್ತು ಕಾರ್ಯದಲ್ಲಿದ್ದಾಗ ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ನಿರತವಾಗಿದ್ದ ಒಂದು ಟಿ.ವಿ.ಎಸ್.ಎಕ್ಸೆಲ್ ಸಂಖ್ಯೆ:ಕೆಎ-08-ಹೆಚ್-7370 ಅನ್ನು 5 ತುಂಡು ಶ್ರೀಗಂಧದ ತುಂಡುಗಳ ಸಮೇತ ಅಮಾನತ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963ರ 71 'ಎ' ಅಡಿ ನಡವಳಿಗಳನ್ನು ನಡೆಸಲು ಹಾಜರುಪಡಿಸಿರುತ್ತಾರೆ.

ಸದರಿ ವಾಹನವನ್ನು ಸುರಕ್ಷಿತಗೊಳಿಸಲು ವಲಯ ಅರಣ್ಯಾಧಿಕಾರಿಗಳು ಕೋಲಾರ ವಲಯ ಕೋಲಾರ ಇವರಿಗೆ ಆದೇಶಿಸಿರುತ್ತದೆ. ಇದುವರೆವಿಗೂ ವಾಹನದ ಮಾಲೀಕತ್ವ ಕೋರಿ ಯಾರೂ ಹಾಜರಾಗಿರುವುದಿಲ್ಲ. ಆದ್ದರಿಂದ ವಾಹನದ ಮಾಲೀಕತ್ವ ಹೊಂದಿರುವವರಿಗೆ ಈ ಮೂಲಕ ಸೂಚನೆ ನೀಡುತ್ತಾ, ಈ ಪ್ರಕಟಣೆಯ 15 ದಿನಗಳೊಳಗಾಗಿ ವಾಹನದ ಮೂಲ ದಾಖಲೆಗಳೊಡನೆ ಹಾಜರಾಗಿ ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ಭಾಗಿಯಲ್ಲವೆಂದು ರುಜುವಾತುಪಡಿಸಲು ಸೂಚಿಸಿದೆ. ಸದರಿ ಅವಧಿಯಲ್ಲಿ ಯಾರೂ ಹಾಜರಾಗದೆ ಇದ್ದಲ್ಲಿ ಮತ್ತು ವಾಹನದ ಮಾಲೀಕತ್ವವನ್ನು ಮತ್ತು ಪ್ರಕರಣದಲ್ಲಿ ಭಾಗಿಯಲ್ಲವೆಂದು ರುಜುವಾತು ಮಾಡದಿದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ 71 'ಎ' ಅಡಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಲಾಗುವುದು.

ಪಿ.ಆರ್. 1523 ಅಧಿಕೃತ ಅಧಿಕಾರಿಗಳು ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕೋಲಾರ ವಿಭಾಗ, ಕೋಲಾರ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರ ನ್ಯಾಯಾಲಯದಲ್ಲಿ**

**ದಾವಾ ಸಂಖ್ಯೆ: ಡಿಆರ್‌ಬಿ-2/ಡಿ/287/2004-05**

**ವಾದಿ:**

ವ್ಯವಸ್ಥಾಪಕರು,
ದಿ ಕಮರ್ಷಿಯಲ್ ಪತ್ತಿನ ಸಹಕಾರ ಸಂಘ ನಿಯಮಿತ,
ನಂ.1031/ಎ, 26ನೇ ಮೈನ್ ರಸ್ತೆ, 9ನೇ ಬ್ಲಾಕ್,
ಜಯನಗರ, ಬೆಂಗಳೂರು - 560 069.

**ಪ್ರತಿವಾದಿ:**

1. ಶ್ರೀ ಬಿ.ಎನ್. ನರಸಿಂಹಮೂರ್ತಿ ಬಿನ್ ಕೆ.ಹೆಚ್. ಲಕ್ಷ್ಮಿನರಸಿಂಹಯ್ಯ ನಂ.222, 2ನೇ ಮೈನ್ ರಸ್ತೆ, ಶ್ರೀ ಗಂಗಾಧರೇಶ್ವರ ನಿಲಯ, ಹನುಮಗಿರಿನಗರ, ಚಿಕ್ಕಲಸಂದ್ರ, ಬೆಂಗಳೂರು-560 061.
2. ಶ್ರೀಮತಿ ಸಿ.ಕೆ. ನಾಗರತ್ನ ಕೋಂ ಶಿವಕುಮಾರ್, ನಂ.3/ಎ, 36ನೇ ಕ್ರಾಸ್, 9ನೇ ಬ್ಲಾಕ್, ಜಯನಗರ, ಬೆಂಗಳೂರು-69.

**ಪ್ರಸ್ತಾವನೆ:**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.74,28,705-00 ಗಳನ್ನು ದಿನಾಂಕ 1-4-2002 ರಿಂದ ಶೇಕಡಾ 18 ರಂತೆ ಬಡ್ಡಿ ಮತ್ತು ಶೇ.2 ರಂತೆ ಸುಸ್ತಿ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿ ಪರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಗಳು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು,

ಇದನ್ನು ತಡೆಯದೆ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್/ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ. ಈ ನ್ಯಾಯಾಲಯವು ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಿ ದಿನಾಂಕ: 16.9.2004 ರಂದು ಪ್ರತಿವಾದಿಗಳಿಗೆ ನೀಡಿರುವ ನೋಟೀಸನ್ನು ಪ್ರತಿವಾದಿಗಳ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ನೀಡಿರುತ್ತದೆ. ಅಲ್ಲದೆ ಪ್ರತಿವಾದಿಗಳು ಈ ನ್ಯಾಯಾಲಯವು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿರುವ ಸದರಿ ಆದೇಶವನ್ನು ಹಿಂದಕ್ಕೆ ಪಡೆಯಬೇಕೆಂದು ಇಚ್ಛಿಸಿದಲ್ಲಿ ರೂ.74,28,705-00 ಗಳನ್ನು ವಾದಿ ಸಂಘದಲ್ಲಿ ಅಮಾನತ್ ಖಾತೆಗೆ ದಿನಾಂಕ: 15.10.2004 ರ ಒಳಗಾಗಿ ಜಮಾ ಮಾಡಿದ ಬಗ್ಗೆ ಅಧಿಕೃತ ಚಲನ್/ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಈ ಮೂಲಕ ನಿರ್ದೇಶಿಸಲಾಗಿತ್ತು.

ಆದರೆ ವಾದಿಯು ಈ ನ್ಯಾಯಾಲಯಕ್ಕೆ ಸಲ್ಲಿಸಿರುವ ದಿನಾಂಕ: 19.10.2004 ಪತ್ರದಲ್ಲಿ ಪ್ರತಿವಾದಿಗಳು ಈ ನ್ಯಾಯಾಲಯದ ದಿನಾಂಕ: 16.9.2004 ರ ಆದೇಶದ ರೀತ್ಯಾ ವಾದಿ ಸಂಘಕ್ಕೆ ಯಾವುದೇ ಹಣವನ್ನು ಪಾವತಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಈ ಮೂಲಕ ಪ್ರತಿವಾದಿಗಳು ಈ ನ್ಯಾಯಾಲಯವು ಮೇಲ್ಕಂಡ ಆದೇಶದಲ್ಲಿ ವಿಧಿಸಿರುವ ಷರತ್ತನ್ನು ಪಾಲಿಸಲು ವಿಫಲರಾಗಿರುತ್ತಾರೆ. ಆದ್ದರಿಂದ ಈ ನ್ಯಾಯಾಲಯವು ದಿನಾಂಕ: 16.9.2004 ರಂದು ಷರತ್ತಿಗೊಳಪಟ್ಟು ಹೊರಡಿಸಿರುವ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಕಾಯ್ದೆ ಕಲಂ 103 (2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆಯ ಕ್ರಮಾಂಕ : ಸಿಎಂಡಬ್ಲ್ಯೂ 69/ಸಿಎಲ್‌ಎಂ/2001 ದಿನಾಂಕ: 22.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸಿ.ಎನ್. ರುದ್ರಪ್ಪ, ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಪ್ರತಿವಾದಿಗಳ ಹೆಸರಿನಲ್ಲಿರುವ ಚರಾಸ್ತಿಗಳನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿರುವ ಈ ನ್ಯಾಯಾಲಯದ ಆದೇಶದ ಕ್ರಮಾಂಕ:ಡಿಆರ್‌ಬಿ-2/ಡಿ/287/2004-05 ದಿ:16/09/2004ನ್ನು ವಾದಿಯ ಈ ದಾವಾ ಅರ್ಜಿಯ ಇತ್ಯರ್ಥಕ್ಕೆ ಒಳಪಟ್ಟು ಸ್ಥಿರೀಕರಿಸಿ ಈ ಮೂಲಕ ಆದೇಶಿಸಿರುತ್ತೇನೆ.

**ಷೆಡ್ಯೂಲ್ ಸ್ವತ್ತಿನ ವಿವರ:**

1) ಬೆಂಗಳೂರು ನಗರ ಜೆ.ಪಿ.ನಗರ, 6ನೇ ಫೇಸ್ ನಲ್ಲಿರುವ 30 X 70 ಅಡಿ ವಿಸ್ತೀರ್ಣವುಳ್ಳ (ಪೂರ್ವ, ಪಶ್ಚಿಮಕ್ಕೆ 30 ಅಡಿ) (ಉತ್ತರ ದಕ್ಷಿಣಕ್ಕೆ 70 ಅಡಿ) ನಂ.673 ರಲ್ಲಿ ಕಟ್ಟಿರುವ ವಾಸದ ಮನೆ ಸೇರಿದಂತೆ

**ಚೆಕ್ಕುಬಂದಿ**

ಪೂರ್ವಕ್ಕೆ - ನಿವೇಶನ ಸಂಖ್ಯೆ 674
ಪಶ್ಚಿಮಕ್ಕೆ - ನಿವೇಶನ ಸಂಖ್ಯೆ 672
ಉತ್ತರಕ್ಕೆ - ರಸ್ತೆ
ದಕ್ಷಿಣಕ್ಕೆ - ನಿವೇಶನ ಸಂಖ್ಯೆ 372

2) ಬೆಂಗಳೂರು ನಗರ ಜಿಲ್ಲೆಯ ಆನೇಕಲ್ ತಾಲ್ಲೂಕು ಕಸಬಾ ಹೋಬಳಿ, ಬಿದರಕಾಲಹಳ್ಳಿ ಗ್ರಾಮದಲ್ಲಿಯ ಸರ್ವೆ ನಂ.7 ರಲ್ಲಿ 2 ಎಕರೆ 28 ಗುಂಟೆ

**ಚೆಕ್ಕುಬಂದಿ**

ಪೂರ್ವಕ್ಕೆ - ಸರ್ಕಾರಿ ಭೂಮಿ
ಪಶ್ಚಿಮಕ್ಕೆ - ಇತರೇ ಆಸ್ತಿ
ಉತ್ತರಕ್ಕೆ - ಶ್ರೀ ನಾರಾಯಣ ರೆಡ್ಡಿಯವರ ಭೂಮಿ
ದಕ್ಷಿಣಕ್ಕೆ - ಶ್ರೀ ಪಿ. ಕೃಷ್ಣರೆಡ್ಡಿಯವರ ಭೂಮಿ

3) ಬೆಂಗಳೂರು ನಗರ ಜಿಲ್ಲೆಯ ಆನೇಕಲ್ ತಾಲ್ಲೂಕು ಕಸಬಾ ಹೋಬಳಿ, ಬಿದರಕಾಲಹಳ್ಳಿ ಗ್ರಾಮದಲ್ಲಿಯ ಸರ್ವೆ ನಂ.7 ರಲ್ಲಿ 1 ಎಕರೆ

**ಚೆಕ್ಕುಬಂದಿ**

ಪೂರ್ವಕ್ಕೆ - ಸರ್ವೆ ನಂ.7
ಪಶ್ಚಿಮಕ್ಕೆ - ಸರ್ವೆ ನಂ.7
ಉತ್ತರಕ್ಕೆ - ಸರ್ವೆ ನಂ.7
ದಕ್ಷಿಣಕ್ಕೆ - ಶ್ರೀ ಸುಂದರರಾಮರೆಡ್ಡಿಯವರ ಭೂಮಿ
(ಈ ಆಸ್ತಿ 1ನೇ ಪ್ರತಿವಾದಿಗೆ ಸೇರಿದ್ದಾಗಿದೆ)

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಈ ಕಛೇರಿಯ ಮೊಹರು ನಿಶೆಯೊಂದಿಗೆ ದಿನಾಂಕ: 19.10.2004 ರಂದು ನೀಡಿರುತ್ತೇನೆ.

**ಸಿ.ಎನ್. ರುದ್ರಪ್ಪ**

ಪಿ.ಆರ್. 1524 ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ**
**ನಂ.ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/602/95-96, ದಿನಾಂಕ: 15ನೇ ಅಕ್ಟೋಬರ್ 2004**

**ಉಪಸ್ಥಿತರು** : ಶ್ರೀ ಕೆ.ಸಿ. ಹರಿದಾಸ್, ಕೆ.ಇ.ಎಸ್.
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದುದಾರರು** : ಶ್ರೀ ಎನ್. ರಾಮಚಂದ್ರ, ಪೊಲೀಸ್ ಉಪ ನಿರೀಕ್ಷಕರು, ಚಿತ್ತಾಕುಲಾ ಪೊಲೀಸ್ ಠಾಣೆ.
(ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ)

ವಿರುದ್ಧ

**ಅರ್ಜಿದಾರ** : ಶ್ರೀ ಈ.ಜೆ.ಎಂ. ಕೆಸ್ಟಿಲಿನೋ, ವಾಸ: ಕುಲಶೇಖರ, ಮಂಗಳೂರು ಇವರ ಜಿ.ಪಿ.ಎ. ಧಾರಕರಾದ ಶ್ರೀ ಕಿರಣ ಜೆ. ಕೆಸ್ಟಿಲಿನೋ, ಕಿರಣ ಟ್ರಾನ್ಸ್‌ಪೋರ್ಟ್, ಜಯಶ್ರೀ ಗೇಟ್, ಕುಲಶೇಖರ ಪೋಸ್ಟ್, ಮಂಗಳೂರು-5.
(ಶ್ರೀ ಎ.ಡಿ. ಚಿಪ್ಕರ್, ವಕೀಲರು, ಕಾರವಾರ ಇವರು ಪ್ರತಿನಿಧಿಸಿರುತ್ತಾರೆ)

**ತೀರ್ಪು**

1. ಈ ಆರೋಪಣಾ ಪಟ್ಟಿಯನ್ನು ಪೊಲೀಸ್ ಉಪ ನಿರೀಕ್ಷಕರು, ಚಿತ್ತಾಕುಲಾ ಪೊಲೀಸ್ ಠಾಣೆ ಇವರು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32 ಮತ್ತು 34 ರಡಿಯಲ್ಲಿ ಸಲ್ಲಿಸಿ ಜಪ್ತಿಯಾದಂತಹ ಸ್ವತ್ತುಗಳನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

2. ಈ ಪ್ರಕರಣದ ಫಿರ್ಯಾದುದಾರರು ದಿನಾಂಕ: 28.6.1996 ರಂದು ರಾತ್ರಿ ಗಸ್ತಿನ ಕರ್ತವ್ಯದ ನಿಮಿತ್ಯ ಪಿ.ಸಿ. 1172 ನೇಯವರ ಜೊತೆಯಲ್ಲಿ 23-15 ಗಂಟೆಗೆ ಸರ್ಕಾರಿ ಮೋಟಾರ್ ಸೈಕಲ್ ಮೇಲೆ 23-30 ಗಂಟೆಯ ವೇಳೆಗೆ ಕಾರವಾರ ತಾಲ್ಲೂಕಿನ ಚಿತ್ತಾಕುಲಾದ ಕಾಳಿ ಬ್ರಿಡ್ಜ್ ಟೋಲ್‌ಗೇಟ್ ಹತ್ತಿರ ತಲುಪಿದಾಗ ಗೋವಾ ಕಡೆಯಿಂದ ಬಂದಂತಹ ಲಾರಿ ಸಂಖ್ಯೆ: ಸಿಆರ್‌ಎಕ್ಸ್/9965 ನೇದನ್ನು ನಿಲ್ಲಿಸಿ ತಪಾಸಿಸಲಾಗಿ ಅದರ ಹಿಂದುಗಡೆ ಉಕ್ಕಿನ ತುಂಡುಗಳು ಲೋಡ್ ಮಾಡಲಾಗಿದ್ದು, ಸದರಿ ಲೋಡ್ ಮೇಲೆ 3 ಗೋಣಿ ಚೀಲದ ಪೊಟ್ಲೆಗಳು ಹಾಗೂ 5 ಮತ್ತು 10 ಲೀಟರ್ ಅಳತೆಗಳ ಕ್ಯಾನುಗಳು ಇದ್ದದ್ದು ಕಂಡುಬಂದಾಗ ಕೂಡಲೇ ಚಾಲಕನಿಗೆ ಅವುಗಳಲ್ಲಿ ಏನಿವೆ ಎಂದು ಕೇಳಲಾಗಿ ಸದರಿಯವರು ಅನುಮಾನಾಸ್ಪದ ರೀತಿಯಲ್ಲಿ ಮಾತನಾಡಿದಾಗ ಕೂಡಲೇ ಸ್ಥಳದಲ್ಲಿ ಲಭ್ಯವಿದ್ದ ಪಂಚರನ್ನು ಹಾಗೂ ಇನ್ನಿಬ್ಬರು ಸಿಬ್ಬಂದಿಗಳನ್ನು ಸ್ಥಳಕ್ಕೆ ಕರೆಯಿಸಿ ಪಂಚರ ಸಮಕ್ಷಮ ಪೊಟ್ಲೆಗಳು ಮತ್ತು ಕ್ಯಾನುಗಳನ್ನು ತೆರೆದು ನೋಡಲಾಗಿ, ಅವುಗಳು ಗೋವಾ ಸರಾಯಿ ಎಂಬುದು ಖಾತ್ರಿಯಾದಾಗ ಕೂಡಲೇ ಚಾಲಕ ಮತ್ತು ಕ್ಲೀನರ್‌ನಿಗೆ ಇವುಗಳ ಸಾಗಾಟದ ಬಗ್ಗೆ ಪಾಸ್ ಅಥವಾ ಪರ್ಮಿಟ್ ಇದೆಯೇ ಎಂದು ಕೇಳಲಾಗಿ ಅವರುಗಳು ಇಲ್ಲವೆಂದು ತಿಳಿಸಿದಾಗ, ಅವರುಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ವಾಹನದಲ್ಲಿ ಇದ್ದಂತಹ ಕ್ಯಾನುಗಳನ್ನು ಹಾಗೂ ಪೊಟ್ಲೆಗಳನ್ನು ಕೆಳಗಿಳಿಸಿ ನೋಡಲಾಗಿ ಪ್ರತಿಯೊಂದರಲ್ಲಿ ತಲಾ 10 ಲೀಟರಿನಂತೆ ಗೋವಾ ಸರಾಯಿ ಇರುವ 7 ಕ್ಯಾನುಗಳು ಹಾಗೂ ಪ್ರತಿಯೊಂದರಲ್ಲಿ 5 ಲೀಟರಿನಂತೆ ಗೋವಾ ಸರಾಯಿ ಇರುವ 10 ಕ್ಯಾನುಗಳು ಇದ್ದದ್ದು ಕಂಡುಬಂತೆಂದೂ ನಂತರ ಪೊಟ್ಲೆಗಳನ್ನು ಬಿಡಿಸಿ ನೋಡಲಾಗಿ ಎಂಪರರ್ ಡಾ. ಬ್ರಾಂಡಿ ಎಂ 180 ಮಿ.ಲೀನ. 168 ಬಾಟ್ಲಿಗಳು, ಡಾ. ನಂ.1 ಬ್ರಾಂಡಿ 180 ಮಿ.ಲೀನ. 48 ಬಾಟ್ಲಿಗಳು, ಟೋನಿಯಾ ತ್ರಿಎಕ್ಸ್ ರಂ 180 ಮಿ.ಲೀನ. 24 ಬಾಟ್ಲಿಗಳು, ಟೋನಿಯಾ ಡ್ರೈ ಜಿನ್ 180 ಮಿ.ಲೀನ 12 ಬಾಟ್ಲಿಗಳು, ಕ್ವೀನ್ಸ್ ಬ್ರಾಂಡಿ 180 ಮಿ.ಲೀನ. 20 ಬಾಟ್ಲಿಗಳು, ಡಾ. ಇಂಟರ್ ನ್ಯಾಶನಲ್ ಬ್ರಾಂಡಿ 180 ಮಿ.ಲೀನ 24 ಬಾಟ್ಲಿಗಳು ಹಾಗೂ 375 ಮಿ.ಲೀನ 90 ಕಾಣಕೋಣ ನಂ.1 ಫೆನ್ನಿ ಬಾಟ್ಲಿಗಳು ಇದ್ದದ್ದು ಕಂಡುಬಂದಿದ್ದರಿಂದ ರಾಸಾಯನಿಕ ವಿಶ್ಲೇಷಣೆಗಾಗಿ ತೆಂಗಿನ ಸರಾಯಿಯಿಂದ 180 ಮಿ.ಲೀ.ನಂತೆ 17 ಸೀಸೆಗಳು ಹಾಗೂ ವಿವಿಧ ರೀತಿಯ ಲೇಬಲಿನ ಮದ್ಯದ ಪೈಕಿ ಪ್ರತಿಯೊಂದರಿಂದ ಒಂದೊಂದರಂತೆ 7 ಸೀಸೆಗಳು ಮಾದರಿಗಾಗಿ ತೆಗೆದು, ಲಾರಿ ಹಾಗೂ ಮದ್ಯದ ವಸ್ತುಗಳನ್ನು ಪಂಚರ ಸಮಕ್ಷಮ ಜಪ್ತಿ ಕ್ರಮ ಜರುಗಿಸಿ ಠಾಣೆಗೆ ಬಂದು ತನ್ನ ಫಿರ್ಯಾದನ್ನು ದಾಖಲಿಸಿ ಚಿತ್ತಾಕುಲಾ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 83/96, ದಿನಾಂಕ: 29.6.96 ರಂತೆ ಗುನ್ನೆಯನ್ನು ದಾಖಲಿಸಿ, ಗುನ್ನೆಗೆ ಸಂಬಂಧಿಸಿದ ಪ್ರ.ಮಾ. ವರದಿ ಮತ್ತು ಪಂಚನಾಮೆಯ ದೃಢೀಕೃತ ನಕಲು ಹಾಗೂ ಸ್ವತ್ತಿನ ಪಟ್ಟಿಯನ್ನು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

3. ದಿನಾಂಕ: 3.7.96 ರಂದು ಶ್ರೀ ಎ.ಡಿ. ಚಿಪ್ಕರ್, ವಕೀಲರು, ಕಾರವಾರ ಇವರು ಈ ಪ್ರಾಧಿಕಾರದಲ್ಲಿ ತನ್ನ ಅರ್ಜಿಯನ್ನು ಸಲ್ಲಿಸಿ, ಪ್ರಕರಣದಲ್ಲಿ ಜಪ್ತಿಯಾದ ವಾಹನವು ಶ್ರೀ ಇ.ಜೆ.ಎಂ. ಕೆಸ್ಟಿಲಿನೋ ಇವರದಾಗಿದ್ದು, ಈ ವಾಹನವು ದಿನಾಂಕ: 28.6.96 ರಂದು ಗೋವಾ ಕಡೆಯಿಂದ ಕಾರವಾರ ಕಡೆಗೆ ಸ್ಟೀಲ್ ರಾಡ್‌ಗಳನ್ನು ಹೇರಿಕೊಂಡು ಬರುತ್ತಿದ್ದಾಗ ಮಾಜಾಳಿಯ ಚೆಕ್ ಪೋಸ್ಟ್ ಹತ್ತಿರ ಕೆಲವು ಮಹಿಳೆಯರು ಕೆಲವು ಲಗೇಜುಗಳೊಂದಿಗೆ ವಾಹನವನ್ನು ನಿಲ್ಲಿಸಿ ಮಾಜಾಳಿ ಚೆಕ್ ಪೋಸ್ಟಿನಲ್ಲಿ ಕರ್ತವ್ಯದಲ್ಲಿದ್ದಂತಹ ಸಿಬ್ಬಂದಿಗಳ ಸಹಾಯದಿಂದ ವಾಹನದ ಚಾಲಕನಲ್ಲಿ ತಮ್ಮನ್ನು ಕಾರವಾರಕ್ಕೆ ಸಾಗಿಸುವಂತೆ ವಿನಂತಿಸಿಕೊಂಡು ಲಾರಿಯನ್ನು ಏರಿದರೆಂದೂ, ನಿಜಕ್ಕೂ ಲಗೇಜುಗಳಲ್ಲಿ ಏನಿದೆ ಎಂಬುದನ್ನು ಚಾಲಕನು ನೋಡಿರಲಿಲ್ಲವೆಂದೂ, ರಾತ್ರಿ ಸುಮಾರು 10-30 ಗಂಟೆಗೆ ಲಾರಿಯು ಚಿತ್ತಾಕುಲಾದ ಟೋಲ್‌ನಾಕಾ ಹತ್ತಿರ ಟಿಕೇಟನ್ನು ಖರೀದಿಸುವುದಕ್ಕಾಗಿ ನಿಲ್ಲಿಸಿದಾಗ ಕೆಲವು ಪೊಲೀಸರು ಬಂದು ವಾಹನದಿಂದ ಕೆಳಗಿಳಿದು ಓಡಲು ಪ್ರಾರಂಭಿಸಿದಂತಹ 3 ಜನ ಮಹಿಳೆಯರನ್ನು ವಶಕ್ಕೆ ತೆಗೆದುಕೊಂಡು ಅವರನ್ನು ಬಡೆದು ಹಾಗೆಯೇ ಹೋಗಲು ಬಿಟ್ಟರೆಂದೂ, ನಂತರ ಟ್ರಕ್‌ನಲ್ಲಿ ಪರಿಶೀಲಿಸಿದಾಗ ಮದ್ಯ ತುಂಬಿದಂತಹ ಕೆಲವೊಂದು ಚೀಲಗಳು ಇದ್ದದ್ದು ಕಂಡುಬಂತೆಂದೂ, ಆಗ ಪೊಲೀಸರು ನಿಜವಾದ ಆರೋಪಿಗಳನ್ನು ಬಿಟ್ಟು ವಾಹನದ ಚಾಲಕ ಹಾಗೂ ಕ್ಲೀನರ್‌ನನ್ನು ದಸ್ತಗಿರಿ ಮಾಡಿ ವಾಹನ ಹಾಗೂ ಮದ್ಯದ ವಸ್ತುಗಳನ್ನು ಜಪ್ತಿ ಮಾಡಿಕೊಂಡು ಗುನ್ನೆ ದಾಖಲಿಸಿದರೆಂದೂ, ವಾಹನದಲ್ಲಿ ಪೊಟ್ಲೆಗಳನ್ನು ತಂದಂತಹ ಮಹಿಳೆಯರು ಹವ್ಯಾಸಿ ಆರೋಪಿಗಳಾಗಿರುವ ಬಗ್ಗೆ ಅವರ ಇತಿಹಾಸವು ಪೊಲೀಸರಿಗೆ ಚೆನ್ನಾಗಿ ಗೊತ್ತಿದ್ದು, ವಾಹನದ ಮಾಲೀಕರಿಗಾಗಲೀ ಅವರ ನೌಕರರಿಗಾಗಲೀ ಸದರಿ ಮಹಿಳೆಯರ ಬಗ್ಗೆ ಗೊತ್ತಿರಲಿಲ್ಲವೆಂದೂ, ವಾಹನ ಮತ್ತು ವಾಹನದ ಚಾಲಕ ಹಾಗೂ ಕ್ಲೀನರ್‌ನಿಗೆ ಈ ಪ್ರಕರಣದಲ್ಲಿ ಸುಮ್ಮನೆ ಸೇರಿಸಲಾಗಿದೆಯೆಂದೂ, ಸದರಿ ಮಹಿಳೆಯರು ಅಕ್ರಮ ಮದ್ಯದ ವಹಿವಾಟುಗಾರರು ಎಂಬುದರ ಬಗ್ಗೆ ವಾಹನದ ಮಾಲೀಕರಿಗಾಗಲೀ ಅವರ ನೌಕರರಿಗಾಗಲೀ ಗೊತ್ತಿರಲಿಲ್ಲವೆಂದೂ ತಿಳಿಸುತ್ತಾ, ವಾಹನವು ಅರ್ಜಿದಾರರ ದೈನಂದಿನ ವ್ಯವಹಾರಕ್ಕೆ ಅವಶ್ಯಕವಿರುತ್ತದೆಂದು ತಿಳಿಸಿ ವಾಹನವನ್ನು ಮುಂದಿನ ಆದೇಶವಾಗುವವರೆಗೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡುವಂತೆ ವಿನಂತಿಸುತ್ತಾರೆ.

4. ಈ ಪ್ರಕರಣದಲ್ಲಿ ಜಪ್ತಿಯಾದಂತಹ ವಾಹನ ಮತ್ತು ಮದ್ಯದ ವಸ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುವುದಕ್ಕಾಗಿ ಕಾರಣಕೇಳಿ ನೋಟೀಸನ್ನು ದಿನಾಂಕ: 3.7.1996 ರಂದು ಅರ್ಜಿದಾರ/ವಾಹನದ ಮಾಲೀಕರಿಗೆ ನೀಡಲಾಗಿ, ಅದನ್ನು ಅವರ ಪರ ವಕೀಲರು ಅದೇ ದಿನ ಸ್ವೀಕರಿಸಿ ಅದಕ್ಕೆ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ. ಬದಲಾಗಿ ದಿನಾಂಕ: 10.7.96 ರಂದು ಶ್ರೀ ಎ.ಡಿ. ಚಿಪ್ಕರ, ವಕೀಲರು ಕಾರವಾರ ಇವರು ಇನ್ನೊಂದು ಅರ್ಜಿಯನ್ನು ಸಲ್ಲಿಸುತ್ತಾ, ಈ ಪ್ರಕರಣದಲ್ಲಿ ಜಪ್ತಿಯಾಗಿರುವ ಸ್ಟೀಲ್ ರಾಡ್‌ಗಳು ಫಸ್ಟ್ ಸ್ಟೀಲ್ ಕಂಪನಿ ಪ್ರೈ.ಲಿ. ಹುಬ್ಬಳ್ಳಿ, ಇವರಿಗೆ ಸೇರಿದ್ದಾಗಿದ್ದು ಇವು ಮುಟ್ಟುಗೋಲು ಹಾಕಿಕೊಳ್ಳುವಂತಹ ವಸ್ತುವಾಗಿರದ ಕಾರಣ ಇವುಗಳನ್ನು ಬಿಡುಗಡೆ ಮಾಡಲು ಆದೇಶಿಸಬೇಕಾಗಿ ವಿನಂತಿಸಿರುತ್ತಾರೆ.

5. ಈ ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/602/95-96, ದಿನಾಂಕ: 10.7.96 ರಂತೆ ಈ ಪ್ರಕರಣದಲ್ಲಿ ಜಪ್ತಿಯಾದಂತಹ ವಾಹನಕ್ಕೆ ರೂಪಾಯಿ 1,47,000/-ಗಳ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಕೆಲವು ಷರತ್ತುಗಳನ್ನು ವಿಧಿಸಿ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ನನ್ನ ಪೂರ್ವಾಧಿಕಾರಿಗಳು ಆದೇಶಿಸಿರುತ್ತಾರೆ. ಹಾಗೆಯೇ ಫಿರ್ಯಾದುದಾರರು ತಯಾರಿಸಿದಂತಹ ಪಂಚನಾಮೆಯ ಪ್ರಕಾರ ಲಾರಿಯ ಮೇಲೆ ಉಕ್ಕಿನ ಲೋಡ್ ಇದ್ದು ಅದರ ಮೇಲೆ ಫೆನ್ನಿ ಹಾಗೂ ಮದ್ಯದ ವಸ್ತುಗಳು ಇದ್ದ ಬಗ್ಗೆ ಕಂಡುಬಂದಿದ್ದು, ಸದರಿ ಸ್ಟೀಲಿಗೂ ಮತ್ತು ಮದ್ಯದ ವಸ್ತುಗಳಿಗೂ

ಯಾವುದೇ ಸಂಬಂಧವಿರದ ಕಾರಣ ಹಾಗೂ ಸ್ಟೀಲಿನೊಂದಿಗೆ ಮದ್ಯದ ವಸ್ತುಗಳನ್ನು ಮುಚ್ಚಿಟ್ಟಿರದ ಕಾರಣ ಸದರಿ ಸ್ಟೀಲ್ ರಾಡ್‌ಗಳನ್ನು ಜಿ.ಪಿ.ಎ. ಧಾರಕರಿಗೆ ಬಿಟ್ಟುಕೊಡಲು ಸಹ ಪೂರ್ವಾಧಿಕಾರಿಗಳ ಆದೇಶವಾಗಿರುವಂತೆ ಕಂಡುಬಂದಿದೆ.

6. ಪ್ರಕರಣದ ತನಿಖಾಧಿಕಾರಿಗಳು ದಿನಾಂಕ: 25.7.1997 ರಂದು ಈ ಪ್ರಾಧಿಕಾರಕ್ಕೆ ರಾಸಾಯನಿಕ ವಿಶ್ಲೇಷಣಾ ವರದಿಯ ನಕಲನ್ನು ಮುಂದಿನ ಕ್ರಮಕ್ಕಾಗಿ ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಇದು ಮಾನವ ಸೇವನೆಗೆ ಯೋಗ್ಯವಿರುವುದಿಲ್ಲವಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

7. ಪ್ರಾಧಿಕಾರದ ಆದೇಶ ಸಂಖ್ಯೆ:ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/602/1995-96 ದಿನಾಂಕ:18/05/1998 ರಂತೆ ಈ ಪ್ರಕರಣದಲ್ಲಿ ಜಪ್ತಿಯಾದ ಮದ್ಯದ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಇವು ಮಾನವನ ಸೇವನೆಗೆ ಯೋಗ್ಯವಿಲ್ಲದಿರುವ ಪ್ರಯುಕ್ತ ಸಿ.ಪಿ.ಐ. ಕದ್ರಾ ರವರ ಸಮಕ್ಷಮ ನಾಶಪಡಿಸಲು ಹಾಗೂ ಖಾಲಿ ಬಾಟಲಿಗಳು ಮತ್ತು ಖಾಲಿ ಸೀಸೆಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಅಬಕಾರಿ ನಿರೀಕ್ಷಕರು, ಕಾರವಾರ ವಲಯ ಇವರಿಗೆ ಆದೇಶಿಸಲಾಗಿರುತ್ತದೆ.

8. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ(1) ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿಆರ್‌ಪಿಸಿ ಕಲಂ 207 ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕಲಂ 32 ಮತ್ತು 34 ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯು 1 ರಿಂದ 2ರ ವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ. 1 ರಿಂದ 5 ರವರೆಗಿನ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿದಾರರಿಬ್ಬರಿಗೂ ಸಾಕಷ್ಟು ನೋಟೀಸುಗಳನ್ನು ಜಾರಿಗಾಗಿ ಕಳುಹಿಸಲಾಗಿ ಇವರುಗಳು ಹಾಜರಾಗದಿದ್ದುದರಿಂದ ಸದ್ರಿಯವರ ಸಾಕ್ಷ್ಯವನ್ನು ಕೈಬಿಡಲಾಗಿದೆ.

9. ಆದಾಗ್ಯೂ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪ್ರಕ್ರಿಯಾ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಡಿ.ಡಬ್ಲ್ಯು 1 ರಂತೆ ನುಡಿಸಿರುತ್ತಾರೆ ಹಾಗೂ ನಿಶಾನೆ ಡಿ-1ನೇಯದನ್ನು ಗುರುತಿಸಿಕೊಂಡಿರುತ್ತಾರೆ.

10. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರ ಹಾಗೂ ಅರ್ಜಿದಾರರ ಪರವಾಗಿ ಶ್ರೀ ವೈ.ಎಸ್. ನಾಯ್ಕ, ವಕೀಲರು ಕಾರವಾರರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬಂತು.

**ವಿವಾದಾಂಶಗಳು:-**

11. 1. ದಿನಾಂಕ:28.6.1996 ರಂದು ರಾತ್ರಿ ಸುಮಾರು 23:30 ಗಂಟೆಗೆ ಕಾರವಾರ ತಾಲ್ಲೂಕಿನ ಚಿತ್ತಾಕುಲಾದ ಟೋಲ್‌ಗೇಟ್ ಹತ್ತಿರ ಫಿರ್ಯಾದಿ ಕಡೆಯವರು ರಾತ್ರಿ ಗಸ್ತು ನಡೆಸುತ್ತಿದ್ದಾಗ ಆರೋಪಿಗಳು ಲಾರಿ ಸಂಖ್ಯೆ:ಸಿಆರ್‌ಎಕ್ಸ್-9965 ನೇದರಲ್ಲಿ ಉಕ್ಕಿನ ತುಂಡು ತುಂಬಿದ್ದು ಅದರ ಮೇಲೆ ಮೂರು ಪೊಟ್ಲೆಗಳಲ್ಲಿ ಗೋವಾ ರಾಜ್ಯದಲ್ಲಿ ತಯಾರಾದ ಮದ್ಯ ಹಾಗೂ 17 ಕ್ಯಾನುಗಳಲ್ಲಿ ಗೋವಾ ಸರಾಯಿಯನ್ನು ಸಾಗಿಸುತ್ತಾ, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32 ಮತ್ತು 34ರಡಿ ಶಿಕ್ಷಾರ್ಹ ಅಪರಾಧವೆಸಗಿರುತ್ತಾರೆಯೇ ಹೇಗೆ?

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೊ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?

3. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

**ಉತ್ತರಗಳು**

12. ಅಂಶ 1:- ಸಕಾರಾತ್ಮಕವಾಗಿ
ಅಂಶ 2:- ನಕಾರಾತ್ಮಕವಾಗಿ
ಅಂಶ 3:- ಸಕಾರಾತ್ಮಕವಾಗಿ

**ಕಾರಣಗಳು**

14. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದ ಪ್ರಕರಣದ ಫಿರ್ಯಾದಿ ಎನ್. ರಾಮಚಂದ್ರ, ಪಿ.ಎಸ್.ಐ. ರವರು ಈ ಪ್ರಾಧಿಕಾರದಲ್ಲಿ ದಿನಾಂಕ:12.09.2001 ರಂದು ಹಾಜರಾಗಿ ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ಈ ಘಟನೆ ಸಂಭವಿಸಿದಾಗ ತಯಾರಿಸಿದ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರು ಮಾಡಿದ ಪಾಟಿ ಸವಾಲಿನಲ್ಲಿ ಗೋವಾ ಕಡೆಯಿಂದ ವಾಹನವನ್ನು ದಾಟಿಸಿ ಬರಬೇಕಾದರೆ ಗೋವಾ ಚೆಕ್‌ಪೋಸ್ಟ್ ಮತ್ತು ಕರ್ನಾಟಕದ ಅಬಕಾರಿ ಚೆಕ್ ಪೋಸ್ಟ್‌ನ್ನು ದಾಟಿಸಿ ಬರಬೇಕಾಗುತ್ತದೆ ಎನ್ನುವುದು ಸರಿಯೆಂದೂ, ಎರಡೂ ಚೆಕ್ ಪೋಸ್ಟ್‌ಗಳಲ್ಲಿ ಅವರು ಸರ್ಕಾರಿ ಡ್ಯೂಟಿ ಮಾಡುತ್ತಾರೋ ಇಲ್ಲವೋ ತನಗೆ ಗೊತ್ತಿಲ್ಲವೆಂದೂ, ಕಾಳಿ ಬ್ರಿಡ್ಜಿನ ಟೋಲ್‌ನಾಕಾದ ಹತ್ತಿರ ನಾವು ಸದರಿ ವಾಹನವನ್ನು ನಿಲ್ಲಿಸಿದೆವೆಂದೂ, ಟೋಲ್‌ನಾಕಾದಲ್ಲಿ ಎರಡೂ ಕಡೆಯಿಂದ ಗೇಟ್ ಹಾಕಿದ್ದು ಅಲ್ಲಿ ಟಿಕೇಟು ನೀಡದೇ ಯಾವುದೇ ವಾಹನವನ್ನು ಬಿಡುವುದಿಲ್ಲವೆನ್ನುವುದು ಸರಿಯೆಂದೂ, ಟೋಲ್‌ನಾಕಾದಲ್ಲಿ ಖಾಯಂ ಆಗಿ ಪೊಲೀಸ್‌ನವರು ಕಾವಲು ಇರುತ್ತಾರೆ ಎನ್ನುವುದು ಸರಿಯಲ್ಲವೆಂದೂ, ವಿಶೇಷ ಸಂದರ್ಭದಲ್ಲಿ ಮಾತ್ರ ಅವರನ್ನು ನೇಮಿಸಲಾಗುತ್ತದೆಂದೂ ಈ ಪ್ರಕರಣದಲ್ಲಿನ ಆರೋಪಿತರು ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ನಿರ್ದೋಷಿಯಾಗಿದ್ದಾರೆ ಎಂಬುದು ತನಗೆ ತಿಳಿದಿಲ್ಲವೆಂದೂ, ಪಂಚನಾಮೆಯಲ್ಲಿರುವ ಸಾಕ್ಷಿಗಳ ಹೆಸರು ಕ್ರಮವಾಗಿ ಮನೋಹರ ಈರಪ್ಪ ಮತ್ತು ಸುಬ್ರಾಯ ಬೆಳವಗಿ ಎಂದಿರುತ್ತದೆಂದೂ, ಪಂಚನಾಮೆಯನ್ನು ದಿನಾಂಕ:28.6.1996ರ ರಾತ್ರಿ 11:35 ಗಂಟೆಯಿಂದ ದಿನಾಂಕ: 29.6.1996 ರ ಬೆಳಗಿನ 1:45 ರ ಗಂಟೆಯವರೆಗೆ ಸ್ಥಳದಲ್ಲಿ ಪಂಚನಾಮೆ ಮಾಡಿದ್ದು ಇರುತ್ತದೆಂದೂ, ತಾವು ಯಾವುದೇ ರೀತಿಯ ಪಂಚನಾಮೆ ಮಾಡಿಲ್ಲ ಎನ್ನುವುದು ಸರಿಯಲ್ಲವೆಂದೂ, ಟ್ರಕ್‌ನಲ್ಲಿದ್ದವರು ತಮ್ಮನ್ನು ನೋಡಿ ಓಡಲು ಪ್ರಯತ್ನಿಸಲಿಲ್ಲ ಏಕೆಂದರೆ ಟೋಲ್‌ನಾಕಾದ ಗೇಟು ತೆರೆದ ಹೊರತು ವಾಹನವನ್ನು ಅವರು ಹೊರಡಿಸಲು ಸಾಧ್ಯವಿರಲಿಲ್ಲವೆಂದೂ, ಟ್ರಕ್‌ನಲ್ಲಿ ಡ್ರೈವರ್ ಮತ್ತು ಕ್ಲೀನರ್ ಇದ್ದರೆಂದೂ, ಟ್ರಕ್ಕಿನ ಅಂದಾಜು ಕಿಮ್ಮತ್ತು 5,00,000 ಆಗಿರುತ್ತದೆ ಆದರೆ ಅದರ ಬೆಲೆಯನ್ನು ನಿರ್ಧರಿಸಲು ಯಾವುದೇ ರೀತಿಯ ಆಧಾರಗಳಿರಲಿಲ್ಲವೆಂದೂ, ಕೆಲವೊಮ್ಮೆ ನಾವು ಅಬಕಾರಿ ದಾಳಿಗೆ ಹೋದಾಗ ಕೆಲವರು ಬಿಟ್ಟುಹೋದ ಸರಾಯಿ ವಸ್ತುಗಳು

ದೊರೆಯುತ್ತವೆನ್ನುವುದು ನಿಜವೆಂದೂ, ಇಂತಹ ಸರಾಯಿಯನ್ನು ಈ ವಾಹನದಲ್ಲಿ ಹಾಕಿ ಸುಳ್ಳು ಕೇಸು ದಾಖಲಿಸಿದ್ದೇವೆ ಎನ್ನುವುದು ಸರಿಯಲ್ಲವೆಂದೂ, ಆರೋಪಿಗಾಗಲಿ ಮತ್ತು ಟ್ರಕ್ಕಿಗಾಗಲಿ ಜಪ್ತಿಯಾದ ಸರಾಯಿಗೆ ಯಾವುದೇ ಸಂಬಂಧವಿಲ್ಲ ಎನ್ನವುದು ಸರಿಯಲ್ಲವೆಂದೂ ನುಡಿದಿರುತ್ತಾರೆ.

**15. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ವಾಹನವು ಎರಡೂ ಚೆಕ್ ಪೋಸ್ಟ್‌ಗಳನ್ನು ದಾಟಿದಾಗಲೂ ಸಹ ಕಂಡುಬಾರದ ಅಕ್ರಮ ಮದ್ಯವು ಚಿತ್ತಾಕುಲಾದ ಹತ್ತಿರ ಹೇಗೆ ದೊರಕಿತು? ಎನ್ನುವುದು ಎದುರುದಾರರ ಪಕ್ಷದವರ ಮುಖ್ಯ ವಾದವಾಗಿದ್ದು ಈ ಪ್ರಾಧಿಕಾರದಲ್ಲಿ ಲಭ್ಯವಿರುವ ಇತರೇ ಪ್ರ.ಮಾ.ವರದಿಗಳ ಪ್ರಕಾರ ಗೋವಾ ರಾಜ್ಯದ ಗಡಿಯಿಂದ ಮಾಜಾಳಿಗೆ ಜಂಗಲ್ ಮೂಲಕ ಕಾಲುದಾರಿಯಲ್ಲಿ ಬರುವ ಮಾರ್ಗವಿದ್ದು, ಸದ್ರಿ ಕಾಲುದಾರಿಯಿಂದ ಮಾಜಾಳಿಗೆ ಬಂದಂತಹ ಮದ್ಯದ ಸೀಸೆಗಳ ಪೊಟ್ಲೆಗಳು ಹಾಗೂ ಸರಾಯಿಯ ಕ್ಯಾನುಗಳನ್ನು ಈ ಲಾರಿಯಲ್ಲಿ ಹೇರಿ ತಂದಿರುವ ಬಗ್ಗೆ ಖಾತ್ರಿಯಾಗಿರುತ್ತದೆ. ಎದುರುದಾರರ ಇನ್ನೊಂದು ಮುಖ್ಯ ವಾದವೇನೆಂದರೆ ಈ ಪ್ರಕರಣದಲ್ಲಿ ಆರೋಪಿಗಳು ನಿರ್ದೋಷಿಯಾಗಿರುವುದು. ಆದರೆ ಕ.ಅ. ಕಾಯ್ದೆ 1965ರ ಕಲಂ 43ಎ(2) ರಲ್ಲಿ ಪ್ರಕರಣಕ್ಕೆ ಸಂಬಂಧಿಸಿದಂತೆ ಆರೋಪಿಗಳನ್ನು ಅಭಿಯೋಜನೆಗೆ ಒಳಪಡಿಸಿರಲಿ ಅಥವಾ ಇಲ್ಲದಿರಲಿ ಅಂತಹ ಪ್ರಕರಣದಲ್ಲಿ ಒಳಗೊಂಡಂತಹ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದಿದೆ. ದಾಳಿಗೆ ಹೋದಾಗ ಯಾರಾದರೂ ಬಿಟ್ಟುಹೋದಂತಹ ಸರಾಯಿ ವಸ್ತುಗಳನ್ನು ಜಪ್ತಿ ಮಾಡಿದಾಗ ಅವುಗಳ ಬಗ್ಗೆ ವಾರಸುದಾರರಿಲ್ಲದ ಗುನ್ಹೆ ದಾಖಲಿಸಲು ಅವಕಾಶವಿರುವಾಗ ಇದೇ ಅರ್ಜಿದಾರರ ವಾಹನದ ಮೇಲೆ ಪ್ರಕರಣ ದಾಖಲಿಸಲು ಫಿರ್ಯಾದಿ ಕಡೆಯವರಿಗೂ ಮತ್ತು ಅರ್ಜಿದಾರರಿಗೂ ಇರುವ ವೈಯಕ್ತಿಕ ಕಾರಣಗಳೇನೆಂಬುದನ್ನು ಎದುರುದಾರರು ವಿವರಿಸಿಲ್ಲ. ಇನ್ನುಳಿದಂತೆ ಕೇಳಲಾದ ಪಾಟಿ ಸವಾಲಿನಲ್ಲಿ ಅರ್ಜಿದಾರರಿಗೆ ಸಹಾಯಕವಾಗುವಂತಹ ಯಾವುದೇ ಪ್ರಶ್ನೆಗಳನ್ನು ಕೇಳಿರುವುದು ಕಂಡುಬರುವುದಿಲ್ಲ.

16. ಈ ಪ್ರಕರಣದಲ್ಲಿ ದಾಳಿಯಲ್ಲಿ ಸಹಕರಿಸಿದಂತಹ ಸಿಬ್ಬಂದಿಯಾದ ಗೋವಿಂದ ನಾಗಪ್ಪ ನಾಯ್ಕ ಪಿ.ಸಿ-688 ನೇಯವರು ದಿನಾಂಕ:28.7.2004 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಪರ ಸಾಕ್ಷ್ಯದಲ್ಲಿ ಮಾನ್ಯ ಎ.ಡಿ.ಪಿ. ಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ಹಾಗೂ ಅರ್ಜಿದಾರರ ಪರ ವಕೀಲರ ಪಾಟಿ ಸವಾಲಿನಲ್ಲಿ ತಾನು ಆ ದಿನ ವಿಶ್ರಾಂತಿಗಾಗಿ ಮನೆಗೆ ಹೋಗಿದ್ದೆನೆಂದೂ, ಮನೆಯಲ್ಲಿದ್ದಾಗ ಈ ಬಗ್ಗೆ ಮಾಹಿತಿ ಬಂದಿತೆಂದೂ, ಆ ದಿನದ ಡ್ಯೂಟಿ ಮುಗಿದಿತ್ತೆಂದೂ, ತಮಗೆ 24 ತಾಸು ಡ್ಯೂಟಿ ಇರುತ್ತದೆಂದೂ, ತಮಗೆ ಸುಧೀರ ವಿ.ನಾಯ್ಕ ಪಿ.ಸಿ.1172 ಇವರು ಕರೆಯಲು ಬಂದಿದ್ದರೆಂದೂ, ಆ ದಿನ ಗಸ್ತಿನ ಡ್ಯೂಟಿಗೆ ತಾನು ಹೋಗಿರಲಿಲ್ಲವೆಂದೂ, ತನಗೆ 23:40 ಗಂಟೆಯ ಸಮಯಕ್ಕೆ ಕರೆಯಲು ಬಂದಿದ್ದರೆಂದೂ, ತಾವು ಅಲ್ಲಿಯೇ ಹೋದಾಗ ಗಾಡಿ ನಿಂತಿತ್ತೆಂದೂ, ಗಾಡಿಯನ್ನು ಸದಾಶಿವಗಡ ಟೋಲ್‌ಗೇಟಿನ ಪಕ್ಕದಲ್ಲಿ ನಿಲ್ಲಿಸಿದ್ದರೆಂದೂ, ಅಲ್ಲಿ ರೇತಿ (ಮರಳು) ಕೆಲಸಕ್ಕಾಗಿ ಹೋಗುವ ಇಬ್ಬರೂ ಕೂಲಿ ಕಾರ್ಮಿಕರು ಪಕ್ಕದ ಮನೆಯಲ್ಲಿ ಇದ್ದವರನ್ನು ಪಂಚರನ್ನಾಗಿ ಕರೆಸಿದೆವೆಂದೂ, ಪಿ.ಎಸ್.ಐ. ರವರು ಪಂಚರಿಗೆ ಕರೆಯಿಸಿದರೆಂದೂ, ಗಾಡಿಯಲ್ಲಿ ಇಬ್ಬರೇ ಇದ್ದು, ಅವರು ರೆಹಮತುಲ್ಲಾ ಮತ್ತು ಲೋಕೇಶ್ ಆಗಿರುತ್ತಾರೆಂದೂ, ಇವರನ್ನು ಬಿಟ್ಟು ಗಾಡಿಯಲ್ಲಿ ಯಾರೂ ಇರಲಿಲ್ಲವೆಂದೂ, ಗಾಡಿಯಲ್ಲಿ ಉಕ್ಕಿನ ಸರಳುಗಳ ಮೇಲೆ 17 ಕ್ಯಾನುಗಳು ಮತ್ತು ಮೂರು ಪೊಟ್ಲೆಗಳಿದ್ದವೆಂದೂ, ಪಂಚರ ಅಭಿಪ್ರಾಯದಂತೆ ಪಿ.ಎಸ್.ಐ. ರವರು ಹೇಳಿದ ಪ್ರಕಾರ ಪಂಚನಾಮೆಯನ್ನು ತಾನು ಬರೆದಿರುತ್ತೇನೆಂದೂ, ಆರೋಪಿಯ ಮೇಲೆ ಜೆ.ಎಂ.ಎಫ್.ಸಿ. ಕಾರವಾರದಲ್ಲಿ ಮೊಕದ್ದಮೆ ದಾಖಲಾಗಿ ಅಲ್ಲಿ ತನ್ನ ಹೇಳಿಕೆಯಾಗಿದ್ದು, ಆ ಕೋರ್ಟಿನಲ್ಲಿ ಈ ಸಂಬಂಧವಾಗಿ ಎಲ್ಲಾ ವಿಚಾರ ತನಗೆ ಗೊತ್ತಿದೆ ಎಂದೂ, ಅಲ್ಲಿ ಪಂಚಸಾಕ್ಷಿಗಳ ವಿಚಾರಣೆ ಆಗಿದೆಯೋ ಇಲ್ಲವೆನ್ನುವ ಬಗ್ಗೆ ತನಗೆ ಗೊತ್ತಿಲ್ಲವೆಂದೂ, ತನ್ನ ಸಾಕ್ಷಿ ಮುಗಿದ ನಂತರ ಮಿಕ್ಕ ವಿಚಾರ ಮಾಡುವ ಅವಶ್ಯಕತೆ ಇಲ್ಲವೆಂದೂ, ಸ್ಯಾಂಪಲ್ ಬಾಟಲಿಗಳನ್ನು ಎಲ್ಲಿಂದ ತಂದಿದ್ದರು ಎನ್ನುವ ಬಗ್ಗೆ ತನಗೆ ಗೊತ್ತಿಲ್ಲವೆಂದೂ, ಪಂಚನಾಮೆಯನ್ನು ತಾನು ಬರೆಯಲಿಲ್ಲವೆನ್ನುವುದಾಗಲಿ ಮತ್ತು ಸ್ಥಳಕ್ಕೆ ಹೋಗಲಿಲ್ಲವೆನ್ನುವುದಾಗಲಿ ಸರಿಯಲ್ಲವೆಂದೂ, ಜಪ್ತಾದ ಮುದ್ದೆ ಮಾಲುಗಳು ಜಪ್ತಾದ ಟ್ರಕ್ಕಿನಲ್ಲಿ ಇರಲಿಲ್ಲವೆನ್ನುವುದು ಸರಿಯಲ್ಲವೆಂದೂ, ಗೋವಾದಿಂದ ಹೆಂಗಸರು ತಂದಂತಹ ಸರಾಯಿಯನ್ನು ಜಪ್ತಿ ಮಾಡಿ ಈ ಪ್ರಕರಣಕ್ಕೆ ಅಳವಡಿಸಿದ್ದೇವೆನ್ನುವುದು ಸರಿಯಲ್ಲವೆಂದೂ, ಪಂಚನಾಮೆಗೆ ಪುಷ್ಟೀಕರಿಸುವ ಸಲುವಾಗಿ ಸುಳ್ಳು ಸಾಕ್ಷಿ ನುಡಿಯುತ್ತಿದ್ದೇನೆನ್ನುವುದು ಸರಿಯಲ್ಲವೆಂದೂ, ನುಡಿದಿರುತ್ತಾರೆ.

**17. ಇಲ್ಲಿ ಗಮನಿಸಬೇಕಾದ ಮುಖ್ಯಾಂಶವೇನೆಂದರೆ:-**

ಸದ್ರಿ ಸಾಕ್ಷಿದಾರರು ಈ ಪ್ರಕರಣದ ಪ್ರತ್ಯಕ್ಷ ಸಾಕ್ಷಿಯಾಗಿರದೇ ಘಟನೆ ಸಂಭವಿಸಿದ ನಂತರ ತನ್ನ ಮೇಲಾಧಿಕಾರಿಯ ಆದೇಶದಂತೆ ಘಟನಾ ಸ್ಥಳಕ್ಕೆ ಬಂದು ಪಂಚಸಾಕ್ಷಿದಾರರ ಹೇಳಿಕೆಯಂತೆ ಪಂಚನಾಮೆಯನ್ನು ಬರೆದಂತಹ ಸಿಬ್ಬಂದಿಯಾಗಿದ್ದು ಇವರು ತಾನು ಕಂಡಂತಹ ಎಲ್ಲಾ ವಿಷಯವನ್ನು ಪಾಟಿ ಸವಾಲಿನಲ್ಲಿ ಸ್ಪಷ್ಟವಾಗಿ ವಿವರಿಸಿದ್ದು, ಮಾದರಿ ಸೀಸೆಗಳನ್ನು ಫಿರ್ಯಾದಿಯವರು ತಂದಿದ್ದರಿಂದ ಈ ವಿಷಯವನ್ನು ಈ ಸಾಕ್ಷಿದಾರರಿಗೆ ಕೇಳುವುದು ಸಮಂಜಸವಾಗಿರುವುದಿಲ್ಲ. ಈ ಎಲ್ಲಾ ಕಾರಣಗಳಿಂದ ಅಭಿಯೋಜನೆ ಪಕ್ಷದವರು ಘಟನೆ ಸಂಭವಿಸಿರುವುದನ್ನು ನಿಸ್ಸಂಶಯವಾಗಿ ನಿರೂಪಿಸಿರುವುದು ಕಂಡುಬರುವುದರಿಂದ ಮೊದಲನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

18. ವಾಹನದ ಮಾಲೀಕರಾದಂತಹ ಈ.ಜೆ.ಎಂ. ಕೆಸ್ಟಿಲಿನೊ ಇವರು ದಿನಾಂಕ: 6.10.2004 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಪರ ವಕೀಲರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ ಸಿಆರ್‌ಎಕ್ಸ್ ಗಾಡಿ ನಂ.9965 ನೇದರ ಮಾಲೀಕನಾಗಿರುತ್ತೇನೆಂದೂ, 96ನೇ ಇಸವಿಯಲ್ಲಿ ತನ್ನ ಕೆಳಗೆ 9 ಟಾಟಾ ಮಾದರಿಯ ಟ್ರಕ್ಕುಗಳಿದ್ದವೆಂದೂ, ಅವುಗಳನ್ನು ಬಾಡಿಗೆಗಾಗಿ ಉಪಯೋಗ ಮಾಡುತ್ತಿದ್ದೇವೆಂದೂ, ಸದ್ರಿ ಟ್ರಕ್ಕುಗಳಲ್ಲಿ ಕಬ್ಬಿಣ ಪ್ಲೈವುಡ್, ಗೊಬ್ಬರ, ರಬ್ಬರ್ ಇತ್ಯಾದಿಗಳನ್ನು ಸಾಗಿಸುತ್ತಿದ್ದೆವೆಂದೂ, ತಾವು ಮಂಗಳೂರಿನಿಂದ ಮುಂಬೈಗೆ, ಕೇರಳಕ್ಕೆ ಮತ್ತು ಗೋವಾಕ್ಕೆ ಸರಕುಗಳನ್ನು ಸಾಗಿಸುತ್ತಿದ್ದೆವೆಂದೂ, 28 ಜೂನ್ 96 ರಲ್ಲಿ ತನ್ನ ಟ್ರಕ್ಕನ್ನು ಡ್ರೈವರ್ ರೆಹಮತುಲ್ಲಾ ನಡೆಸುತ್ತಿದ್ದನೆಂದೂ, ಕ್ಲೀನರ್ ಲೋಕೇಶ ಎಂಬುವನು ಇರುತ್ತಿದ್ದನೆಂದೂ, ಜೂನ್ 96ರ ಐದಾರು ವರ್ಷಗಳ ಪೂರ್ವದಿಂದ ಸದ್ರಿ ಚಾಲಕನು ತನ್ನ ಲಾರಿಯಲ್ಲಿ ಡ್ರೈವರ್ ಅಂತಾ ಕೆಲಸ ಮಾಡುತ್ತಿದ್ದನೆಂದೂ, 96 ನೇಯ ಇಸವಿಯ ನಂತರವೂ 3-4 ವರ್ಷಗಳವರೆಗೆ ಕೆಲಸ ಮಾಡಿದ್ದಾನೆಂದೂ, ತನ್ನ 9 ಲಾರಿಗಳಲ್ಲಿ 4 ಲಾರಿಗಳನ್ನು ಮಾರಿದ ನಂತರ ಸದ್ರಿ ರೆಹಮತುಲ್ಲಾ ಬೇರೆ ಕಡೆಗೆ ಕೆಲಸಕ್ಕೆ ಹೋಗಿದ್ದಾನೆಂದೂ, ಸದ್ರಿ ರೆಹಮತುಲ್ಲಾ ಈತನು ತನ್ನ ಲಾರಿ ತೆಗೆದುಕೊಂಡು ಗೋವಾದ ಕಡೆಗೆ 96ನೇ ಇಸ್ವಿಯಲ್ಲಿ 3-4 ಬಾರಿ ಬಂದಿದ್ದಾನೆಂದೂ, ಅದಕ್ಕೂ ಮುಂಚೆ ಮುಂಬೈ, ಹುಬ್ಬಳ್ಳಿ, ಕೇರಳದ ಕಡೆಗೆ ಹೋಗಿದ್ದಾನೆಂದೂ, ತನ್ನ 9 ಗಾಡಿಗಳಲ್ಲಿ ಡ್ರೈವರ್ ಆಗಲಿ ಕ್ಲೀನರ್ ಆಗಲಿ ಈ ಮುಂಚೆ ಯಾವುದೇ ರೀತಿಯ ಅನಧಿಕೃತ ಸಾಗಾಟದಲ್ಲಿ ಭಾಗಿಯಾಗಿದ್ದು ಇರುವುದಿಲ್ಲವೆಂದೂ, ತಾನು ಅನಧಿಕೃತ ವಸ್ತು ಸಾಗಾಟ ಮಾಡಬಾರದೆಂದು ಅವರಿಗೆ ಹೇಳಿದನೆಂದೂ, ದಿನಾಂಕ:28.6.1996 ರಂದು ತನ್ನ ಡ್ರೈವರನು ತನಗೆ ಫೋನ್ ಮೂಲಕ ವಾಹನ ಜಪ್ತಿ ಮಾಡಿರುವ ಬಗ್ಗೆ ತಿಳಿಸಿದನೆಂದೂ, ಮಾಜಾಳಿ ಚೆಕ್ ಪೋಸ್ಟಿನಲ್ಲಿ ಪೊಲೀಸರು ಮತ್ತು ಎಕ್ಸೈಜ್ ಸಿಬ್ಬಂದಿಗಳು ತನ್ನ ಲಾರಿಯನ್ನು ಪರಿಶೀಲಿಸುತ್ತಿರುವಾಗ ಕೆಲವು ಹೆಂಗಸರು ತಮಗೆ ಕಾರವಾರದವರೆಗೆ ಬಿಡಬೇಕೆಂದು ಚಾಲಕನಲ್ಲಿ ಕೇಳಿಕೊಂಡರೆಂದೂ, ಅವರ ಹೆಂಗಸರಲ್ಲಿ ಸಣ್ಣ ಸಣ್ಣ ಪೊಟ್ಲೆಗಳಿದ್ದವೆಂದು ತನ್ನ ಡ್ರೈವರ್ ತಿಳಿಸಿದನೆಂದೂ, ಕಾಳಿ ಬ್ರೀಜ್ ಟೋಲ್‌ಗೇಟ್ ಹತ್ತಿರ ಬಂದಾಗ ಲಾರಿಯನ್ನು ಟೋಲ್‌ಫೀಜ್ ಕೊಡಲು ಚಾಲಕನು ನಿಲ್ಲಿಸಿದಾಗ, ಅಲ್ಲಿದ್ದ ಪೊಲೀಸರನ್ನು ನೋಡಿ ಆ ಹೆಂಗಸರು ಲಾರಿಯಿಂದ ಇಳಿದು ಅವರ ಪೊಟ್ಲೆಗಳನ್ನು ತೆಗೆದುಕೊಂಡು ಓಡಲು ಶುರು ಮಾಡಿದರೆಂದೂ, ಆ ಹೆಂಗಸರನ್ನು

ಹಿಡಿದು ಹೊಡೆದು ಅವರನ್ನು ಬಿಟ್ಟು ಬಿಟ್ಟರು ಅಂತಾ ಚಾಲಕನು ತನ್ನ ಚಾಲಕನು ಹೇಳಿದನೆಂದೂ, ಆ ಹೆಂಗಸರು ಸರಾಯಿ ಸಾಗಾಟ ಮಾಡುತ್ತಿದ್ದರಂತ ತನಗಾಗಲಿ ತನ್ನ ಡ್ರೈವರ್‌ಗಾಗಲಿ ಗೊತ್ತಿರಲಿಲ್ಲವೆಂದೂ, ಪೊಲೀಸರು ತನ್ನ ಗಾಡಿಯಿಂದ ಸರಾಯಿಯನ್ನು ಜಪ್ತಿ ಮಾಡಿದ್ದು ತನಗೆ ಗೊತ್ತಿಲ್ಲವೆಂದೂ, ತನ್ನ ಗಾಡಿಯಲ್ಲಿ ಸರಾಯಿ ಇರಲಿಲ್ಲವೆಂದೂ, ಪೊಲೀಸರು ತನ್ನ ಚಾಲಕನ ಮತ್ತು ಕ್ಲೀನರ್‌ನ ಮೇಲೆ ಗುನ್ನೆ ದಾಖಲಿಸಿದ್ದಾರೆಂದೂ, ನ್ಯಾಯಾಲಯದಲ್ಲಿ ಈ ಪ್ರಕರಣ ನಡೆದು ಅವರು ನಿರ್ದೋಷಿ ಅಂತ ಬಿಡುಗಡೆಯಾಗಿದ್ದಾರೆಂದೂ, ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ ತೀರ್ಪಿನ ನಂ.ಸಿ.ಸಿ. ನಂ.2042/1996 ನೇದನ್ನು ಇಂದು ಹಾಜರುಪಡಿಸಿದೆನೆಂದೂ, ತನ್ನ ಟ್ರಕ್ಕಿನಲ್ಲಿ ಯಾವತ್ತೂ ಪಾಸ್ ಯಾ ಪರ್ಮಿಟ್ ಇಲ್ಲದೇ ಸರಾಯಿ ಸಾಗಾಟ ಮಾಡಿದ್ದು ಇರುವುದಿಲ್ಲವೆಂದೂ, ಪೊಲೀಸರು ಸುಳ್ಳು ಕೇಸು ಹಾಕಿದ್ದಾರೆಂದೂ, ತನ್ನ ವಾಹನವನ್ನು ತನಗೆ ಶಾಶ್ವತವಾಗಿ ಬಿಟ್ಟುಕೊಡಬೇಕೆಂದು ಈ ಪಾಧಿಕಾರದಲ್ಲಿ ಪ್ರಾರ್ಥಿಸಿಕೊಂಡಿರುತ್ತಾರೆ. ನಂತರ ಮಾನ್ಯ ಎ.ಡಿ.ಪಿ.ಯವರ ಪಾಟೀ ಸವಾಲಿನಲ್ಲಿ ಸದ್ರಿ ದಿವಸ ತನ್ನ ವಾಹನವು ಗೋವಾದಿಂದ ಕಾರವಾರದ ಕಡೆಗೆ ಬರುವಾಗ 8-10 ಜನ ಹೆಂಗಸರನ್ನು ವಾಹನಲ್ಲಿ ಕೂಡ್ರಿಸಿಕೊಂಡು ಬಂದಿದದ್ದರೆಂದು ತನ್ನ ಚಾಲಕನು ತಿಳಿಸಿದ್ದನೆಂದೂ, ಆ ಹೆಂಗಸರ ಕೈಯಲ್ಲಿ ಸಣ್ಣ ಸಣ್ಣ ಪೊಟ್ಲೆಗಳಿದ್ದ ಬಗ್ಗೆ ಚಾಲಕನು ತನಗೆ ತಿಳಿಸಿದ್ದನೆಂದೂ, ತನ್ನ ಚಾಲಕ ಸದ್ರಿ ಕೈಯಲ್ಲಿದ್ದ ಪೊಟ್ಲೆಗಳನ್ನು ಬಿಚ್ಚಿ ತೋರಿಸುವ ಬಗ್ಗೆ ಹೆಂಗಸರಲ್ಲಿ ಕೇಳಿರುವುದಿಲ್ಲವೆಂದೂ, ತಮ್ಮ ವಾಹನವು ಗೂಡ್ಸ್ ವೆಹಿಕಲ್ (ಸರಕುಗಳನ್ನು ಸಾಗಿಸುವ) ವಾಹನವಾಗಿರುತ್ತದೆಂದೂ, ಅದರಲ್ಲಿ ಪ್ರಯಾಣಿಕರನ್ನು ಕರೆತರುವಂತಿಲ್ಲವೆಂದೂ ಹಾಗೆ ಕರೆತಂದಲ್ಲಿ ಅಪರಾಧವಾಗುತ್ತದೆಂದೂ, ಹಾಗೂ ಪ್ರಯಾಣಿಕರನ್ನು ಒಯ್ಯಬಾರದಾಗಿ ಸಹ ಚಾಲಕನಿಗೆ ತಿಳಿಸಿದ್ದೇನೆಂದೂ, ಅಬಕಾರಿ ಮದ್ಯಗಳ ಬೆಲೆ ಗೋವಾ ರಾಜ್ಯಕ್ಕಿಂತ ಕರ್ನಾಟಕ ರಾಜ್ಯದಲ್ಲಿ ಹೆಚ್ಚಿರುತ್ತದೆಂದೂ, ದಿನಾಂಕ:28.6.1996 ರಲ್ಲಿ 23:15 ಗಂಟೆ ಸುಮಾರಿಗೆ ತನ್ನ ವಾಹನ ಸಂಖ್ಯೆ:ಸಿಆರ್‌ಎಕ್ಸ್-9965 ಗೋವಾ ರಾಜ್ಯದಿಂದ ಕರ್ನಾಟಕ ರಾಜ್ಯಕ್ಕೆ ಬರುವ ಕಾಲದಲ್ಲಿ ಅಕ್ರಮವಾಗಿ ಅದರಲ್ಲಿ ಸರಾಯಿ ಸಾಗಾಟ ಮಾಡಿದ ಬಗ್ಗೆ ತನ್ನ ಚಾಲಕ ಹಾಗೂ ಕ್ಲೀನರ್ ಮೇಲೆ ಪ್ರಕರಣ ದಾಖಲು ಮಾಡಿದ್ದು ಇರುತ್ತದೆಂದೂ, ಚಿತ್ತಾಕುಲಾ ಪೊಲೀಸ್ ಠಾಣೆಯ ಸಬ್ ಇನ್ಸ್‌ಪೆಕ್ಟರ್ ಎನ್. ರಾಮಚಂದ್ರ ಇವರಿಗೆ ತನ್ನ ಮೇಲಾಗಲಿ ತನ್ನ ಚಾಲಕನ ಮೇಲಾಗಲಿ ಅಥವಾ ಕ್ಲೀನರ್ ಮೇಲಾಗಲಿ ಯಾವುದೇ ದ್ವೇಷವಿರುವುದಿಲ್ಲವೆಂದೂ, ಸದ್ರಿ ದಿವಸ ತನ್ನ ಚಾಲಕ ತಾನು ತನ್ನ ವಾಹನದಲ್ಲಿ ಪೊಟ್ಲೆಗಳನ್ನು ಇಟ್ಟುಕೊಂಡಿರುವ ಹೆಂಗಸರನ್ನು ಕೂಡ್ರಿಸಿಕೊಂಡು ಬಂದಿದ್ದೇನೆ ಅಂತಾ ತನಗೆ ಸುಳ್ಳು ಮಾಹಿತಿ ಕೊಟ್ಟಿದ್ದಾನೆ ಅನ್ನುವುದು ಸರಿಯಲ್ಲವೆಂದೂ, ಆ ದಿವಸ ತನ್ನ ವಾಹನದಲ್ಲಿ ಚಾಲಕ ಮತ್ತು ಕ್ಲೀನರ್ ಸರಾಯಿ ಸಾಗಾಟ ಮಾಡುತ್ತಿದ್ದರೆನ್ನುವುದು ಸರಿಯಲ್ಲವೆಂದೂ, ಅದೇ ರೀತಿ ತನ್ನ ವಾಹನದಲ್ಲಿ ಚಾಲಕ ಮತ್ತು ಕ್ಲೀನರ್ ಸರಾಯಿ ಸಾಗಾಟ ಮಾಡುತ್ತಿದ್ದ ಬಗ್ಗೆ ತನಗೂ ತಿಳಿದಿತ್ತು ಅನ್ನುವುದು ಸರಿಯಲ್ಲವೆಂದೂ, ತನ್ನ ವಾಹನದಲ್ಲಿ ಅಕ್ರಮ ಅಬಕಾರಿ ವಸ್ತುಗಳನ್ನು ಸಾಗಾಟ ಮಾಡಿದ ನಂತರವೂ ಚಾಲಕ ತನ್ನೊಂದಿಗೆ ನಾಲ್ಕು ವರ್ಷಗಳವರೆಗೆ ಕೆಲಸ ಮಾಡಿಕೊಂಡಿದ್ದಾನೆಂದೂ, ಇಂತಹ ಪ್ರಕರಣಗಳಿಗೆ ತನ್ನ ಚಾಲಕನನ್ನು ಉಪಯೋಗಿಸಿಕೊಳ್ಳಲಾಗುತ್ತಿತ್ತೆಂದು ತಾನು ಆತನನ್ನು ಕೆಲಸದಿಂದ ತೆಗೆದುಹಾಕಿದ್ದೇನೆನ್ನುವುದು ಸರಿಯಲ್ಲವೆಂದೂ ನುಡಿದಿರುತ್ತಾರೆ.

**19. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-**

ಅನಧಿಕೃತ ವಸ್ತುಗಳನ್ನು ಸಾಗಿಸಬಾರದೆಂದು ಅರ್ಜಿದಾರರು ತನ್ನ ಡ್ರೈವರನಿಗೆ ಕೇವಲ ಬಾಯಿ ಮಾತಿನಲ್ಲಿ ಹೇಳಿರುವುದಾಗಿ ತಿಳಿಸಿರುತ್ತಾರೆ. ಆದರೆ 09 ಲಾರಿಗಳ ಒಡೆಯರಾಗಿದ್ದ ಇವರು ತನ್ನ ನೌಕರರಿಗೆ ಈ ಬಗ್ಗೆ ಲಿಖಿತವಾಗಿ ಏಕೆ ತಿಳಿಸಲಿಲ್ಲ ಎಂಬುದರ ಬಗ್ಗೆ ವಿವರಿಸಿಲ್ಲ ಅರ್ಜಿದಾರರು ದಿನಾಂಕ:3.7.96 ರಂದು ಸಲ್ಲಿಸಿರುವ ಅರ್ಜಿಯಲ್ಲಿ ಮಾಜಾಳಿ ಚೆಕ್ ಪೋಸ್ಟಿನ ಸಿಬ್ಬಂದಿಗಳ ಸಹಾಯದಿಂದ ಮಹಿಳೆಯರು ಅಕ್ರಮ ಗೋವಾ ಸರಾಯಿಯ ಪೊಟ್ಲೆ ಹಾಗೂ ಕ್ಯಾನುಗಳನ್ನು ಸದರಿ ಲಾರಿಯಲ್ಲಿ ಹೇರಿದ್ದುದಾಗಿ ತಿಳಿಸಿದ್ದು, ಈಗ ನೀಡಿರುವ ಹೇಳಿಕೆಯಲ್ಲಿ ಚೆಕ್ ಪೋಸ್ಟಿನ ಪೊಲೀಸರು ಹಾಗೂ ಎಕ್ಸೈಜ್ ಸಿಬ್ಬಂದಿಗಳು ತನ್ನ ವಾಹನವನ್ನು ಪರಿಶೀಲಿಸುತ್ತಿರುವಾಗ ಸದರಿ ಮಹಿಳೆಯರು ಲಾರಿಯನ್ನೇರಿದ್ದಾಗಿ ತನ್ನ ಚಾಲಕನು ತಿಳಿಸಿದ್ದಾಗಿ ನುಡಿದಿದ್ದು ಈ ಹೇಳಿಕೆಗಳು ಒಂದಕ್ಕೊಂದು ತಾಳೆಯಾಗುವುದಿಲ್ಲ ಅಲ್ಲದೇ ಹೆಂಗಸರಲ್ಲಿ ಪೊಟ್ಲೆಗಳಿದ್ದ ಬಗ್ಗೆ ಡ್ರೈವರನಿಗೆ ಪೊಟ್ಲೆಗಳಲ್ಲಿರುವ ವಸ್ತುಗಳು ಏನೆಂದು ತಿಳಿಯದಿದ್ದರೂ ಕ್ಯಾನಿನಲ್ಲಿರುವ ದ್ರವ ಪದಾರ್ಥವು ಏನೆಂಬುದರ ಬಗ್ಗೆ ತಿಳಿದಿರಲಿಲ್ಲವೆಂಬುದನ್ನು ನಂಬಲು ಬರುವುದಿಲ್ಲ. ಹೀಗಾಗಿ ಇದು ವಾಹನದ ಮಾಲೀಕರ ಗಮನಕ್ಕೆ ಬಾರದಿದ್ದರೂ ಚಾಲಕನ ಗಮನಕ್ಕೆ ಬಂದೇ ನಡೆದ ಕೃತ್ಯವಾಗಿದೆಯೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಮತ್ತು ತನ್ನ ಚಾಲಕನು ಮಾಡಿದ ತಪ್ಪಿಗಾಗಿ ವಾಹನದ ಮಾಲೀಕನು ಸ್ವತಃ ಹೊಣೆಗಾರನಾಗಿ ಆತನು ಮುಟ್ಟುಗೋಲಿನಂತಹ ಘೋರ ಪರಿಣಾಮವನ್ನು ಪರಾನುಭವದ ಮೂಲಕ ಎದುರಿಸಬೇಕಾಗುತ್ತದೆ. ಈ ಬಗ್ಗೆ ನಮ್ಮ ಗೌರವಾನ್ವಿತ ಉಚ್ಚ ನ್ಯಾಯಾಲಯದ ಕ್ರಿಮಿನಲ್ ರಿವಿಜನ್ ಪಿಟಿಷನ್ ನಂ.338 ಆಫ್ 2000 ದಿನಾಂಕ: 1.10.2002 (ಅಬಕಾರಿ ನಿರೀಕ್ಷಕರು ಬೆಂಗಳೂರು ಗ್ರಾಮಾಂತರ ಜಿಲ್ಲೆ ಹಾಗೂ ಇತರರು ವಿರುದ್ಧ ಪಿ ವೆಂಕಟರಮಣ ಸ್ವಾಮಿ, ಕೆ.ಸಿ.ಸಿ.ಆರ್ 189 2003(1) ನೇದರಲ್ಲಿ ನೀಡಿರುವ ತೀರ್ಪನ್ನು ಈ ಪ್ರಕರಣದಲ್ಲಿ ಆಧಾರವಾಗಿಟ್ಟುಕೊಳ್ಳಲಾಗಿದ್ದು, ಅದು ಈ ಕೆಳಗಿನಂತಿದೆ.

"A close reading of conditions would imply that the person in-charge of the vehicle if he were to misuse the vehicle for illegal transportation directly by himself or allowing others consciously, the owner becomes vicariously liable for the acts and he has to suffer the grave consequences of confiscation. The said excuse is not a ground to exonerate from the consequences of Confiscation under section 43A(2) of the Act. Confiscation confirmed.

20. ಈ ಪ್ರಕರಣದಲ್ಲಿ ಮುಖ್ಯವಾಗಿ ಅಭಿಯೋಜನೆ ಪಕ್ಷದವರು ಸಲ್ಲಿಸಿರುವ ದಾಖಲೆಗಳ ಪ್ರಕಾರ ಮಹಿಳೆಯರ ಬಗ್ಗೆ ಯಾವುದೇ ರೀತಿಯ ಪ್ರಸ್ತಾಪವಿರುವುದಿಲ್ಲವಾದುದರಿಂದ ಇದೊಂದು ಕಟ್ಟು ಕಥೆಯಾಗಿರುವುದು ಕಂಡುಬರುತ್ತದೆ. ಅದೇ ರೀತಿ ಪಾಟೀ ಸವಾಲಿನಲ್ಲಿ ತನ್ನ ವಾಹನವು ಗೂಡ್ಸ್ ವಾಹನವಾಗಿದ್ದು, ಅದರಲ್ಲಿ ಪ್ರಯಾಣಿಕರನ್ನು ಕರೆತರುವುದು ಅಪರಾಧವೆಂದು ಅರ್ಜಿದಾರರು ಒಪ್ಪಿಕೊಂಡಿರುತ್ತಾರೆ. ಅಲ್ಲದೇ ತನ್ನ ವಾಹನ ಚಾಲಕನು ಈ ಕೃತ್ಯ ಸಂಭವಿಸಿದ ನಂತರವೂ ಸಹ ನಾಲ್ಕು ವರ್ಷಗಳವರೆಗೆ ತನ್ನ ಬಳಿ ಕೆಲಸಕ್ಕಿಟ್ಟು ಕೊಂಡಿರುವುದನ್ನು ಅರ್ಜಿದಾರರು ಒಪ್ಪಿಕೊಂಡಿದ್ದು ಇರುತ್ತದೆ. ಈ ಎಲ್ಲ ಕಾರಣಗಳಿಂದಾಗಿ ಘಟನೆ ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರ ಗಮನಕ್ಕೆ ಬಂದುಕೊಂಡೇ ಮತ್ತು ಅವರು ಶಾಮಿಲಾಗಿಯೇ ಈ ವಾಹನದಲ್ಲಿ ಅಕ್ರಮ ಗೋವಾ ಸರಾಯಿ ಹಾಗೂ ಮದ್ಯದ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗುತ್ತದೆ. ಎದುರುದಾರರ ಪಕ್ಷದವರು ಈ ಕೆಳಕಾಣಿಸಿದ ಎರಡು ತೀರ್ಪಗಳನ್ನು ಉಲ್ಲೇಖಿಸಿ, ವಾಹನದ ಬಿಡುಗಡೆಗೆ ಆದೇಶಿಸಲು ವಿನಂತಿಸಿರುತ್ತಾರೆ.

1. ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದ ಕ್ರಿಮಿನಲ್ ರಿವಿಜನ್ ಪಿಟಿಷನ್ ಸಂಖ್ಯೆ:150/1996 ದಿನಾಂಕ:7.2.97 (ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕನ್ಸ್‌ರ್ವೇಟರ್ ಆಫ್ ಫಾರೆಸ್ಟ್ ಬಾಗಲಕೋಟೆ ವಿರುದ್ಧ ರಾಮಕೃಷ್ಣ ಕೇದಾರಬಾ ವಾರಣಕರ)

ಮೇಲಿನ ತೀರ್ಪುಗಳ ಪೈಕಿ ಒಂದನೇಯದರಲ್ಲಿ

"Karnataka Forest Act, 1963 sections 86 and 87 Order of Confiscation of Vehicle allegedly used for transporting sandal wood cannot be sustained, if the accused involved are acquitted by a criminal

Court" ಆದರೆ ಈ ತೀರ್ಪಿನ ನಂತರದ ಇತ್ತೀಚಿನ ಗೌರವಾನ್ವಿತ ಉಚ್ಚ ನ್ಯಾಯಾಲಯದ ತೀರ್ಪು ಐಎಲ್ಆರ್-2002 ಕೆ.ಎ.ಆರ್-1375 (ಡಿ.ಎಸ್. ವಿಜಯಕುಮಾರ ವಿರುದ್ಧ ಡೆಪ್ಯೂಟಿ ಕನ್ಸರ್ವೇಟರ್ ಆಫ್ ಫಾರೆಸ್ಟ್, ಹಾಸನ) ನೇದರಲ್ಲಿ ಈ ಕೆಳಗಿನಂತೆ ತೀರ್ಪಾಗಿದೆ.

Rejecting the Contention of the owner of the seized vehicle that non-filling of a criminal case or acquittal of the accused involved in illegal transport of forest produce, takes away the jurisdiction of the Authorised Officers to initiate confiscation proceedings under section 71A, Hence confirmed the order of Confiscation.

21. ಆದುದರಿಂದ ಕ್ರಿಮಿನಲ್ ನ್ಯಾಯಾಲಯದಲ್ಲಿ ನಿರ್ದೋಷಿಯಾಗಿರುವುದನ್ನು ಈ ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಂಡಿಲ್ಲ. ಅದೇ ರೀತಿ ಐ.ಎಲ್.ಆರ್. 1999 ಕೆ.ಎ.ಆರ್.4123 (ವಿಷಕಂಟೇಗೌಡ ಮತ್ತು ಇತರರು ವಿರುದ್ಧ ರಾಜ್ಯ ಸರ್ಕಾರ)ರಲ್ಲಿ ಪಂಚಸಾಕ್ಷಿದಾರರು ಒಂದು ವೇಳೆ ಪ್ರತಿಕೂಲ ಸಾಕ್ಷಿ ನುಡಿಯುವ ಸಾಕ್ಷಿದಾರರಾಗಿದ್ದರೂ ಸಹ ಅಂತಹ ಪಂಚಸಾಕ್ಷಿದಾರರ ಸಾಕ್ಷ್ಯವನ್ನು ನುಡಿಸುವುದು ಅಭಿಯೋಜನೆ ಪಕ್ಷದವರ ಕರ್ತವ್ಯವೆಂದು ನಿರ್ಣಯಿಸಲಾಗಿದೆ. ಈ ಪ್ರಕರಣದಲ್ಲಿ ಪಂಚ ಸಾಕ್ಷಿದಾರರನ್ನು ಕರೆಯಿಸಲು ಅಭಿಯೋಜಕರು ಸಾಕಷ್ಟು ಪ್ರಯತ್ನಪಟ್ಟಿದ್ದಾರೆ. ಆ ಕುರಿತು ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲೆಗಳ ಪ್ರಕಾರ ದಿನಾಂಕ:22.6.99 ರಿಂದ ದಿನಾಂಕ: 17.5.2000ರ ವರೆಗೆ ತನಿಖಾಧಿಕಾರಿಗಳು ಸಲ್ಲಿಸಿದ ನೋಟೀಸ್ ಜಾರಿಯ ವರದಿಯಲ್ಲಿ ಈ ಪ್ರಕರಣದ ಇಬ್ಬರೂ ಪಂಚಸಾಕ್ಷಿದಾರರುಗಳಿಗೆ ನೋಟೀಸು ಜಾರಿ ಮಾಡಲು ಹೋದಾಗ ಅವರುಗಳು ಬೇರೆ ಊರಿಗೆ ಹೋದ ಕಾರಣ ಜಾರಿಗೆ ಮಾಡಲಾಗದಿರುವ ಬಗ್ಗೆ ವರದಿಯಾಗಿದೆ. ಅಲ್ಲದೇ ದಿನಾಂಕ:17.5.2000 ರಂದು ಸಲ್ಲಿಸಿದ ವರದಿಯಲ್ಲಿ ಸದರಿ ಸಾಕ್ಷಿದಾರರುಗಳ ಸಂಬಂಧಿಗಳಿಗೆ ವಿಷಯ ತಿಳಿಸಿ ಅವರ ಸಹಿ ಪಡೆದ ದಾಖಲೆಯೂ ಇದೆ ಆದಾಗ್ಯೂ ಪಂಚನಾಮೆಗೆ ಸಹಕರಿಸಿದ ಸಿಬ್ಬಂದಿಯ ಹೇಳಿಕೆಯನ್ನು ಸಹ ಈ ಪ್ರಕರಣದಲ್ಲಿ ಪಡೆಯಲಾಗಿದೆ.

22. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತಿ ಮಾಡಲ್ಪಟ್ಟ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸರಾಯಿಯನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ. 62/2001 ದಿನಾಂಕ: 15.7.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ:183/2001 ದಿನಾಂಕ:21.7.2004 ರಂತೆ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ,

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 ಎ(1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಚಿತ್ತಾಕುಲಾ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ. 83/96 ದಿನಾಂಕ: 29.6.1996 ರಲ್ಲಿ ಜಪ್ತಿಯಾದಂತಹ ಲಾರಿ ಸಂಖ್ಯೆ:ಸಿಆರ್‌ಎಕ್ಸ್-9965 ನೇದನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಪ್ರಾಧಿಕಾರದ ಆದೇಶ ಸಂಖ್ಯೆ:ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/602/1995-96 ದಿನಾಂಕ:10.7.1996 ನೇದರಂತೆ ಈ ಪ್ರಕರಣದಲ್ಲಿ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿರುವ ವಾಹನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ. ಹಾಗೂ ಸ್ಟೀಲ್ ರಾಡ್‌ಗಳನ್ನು ಶಾಶ್ವತವಾಗಿ ಬಿಡುಗಡೆ ಮಾಡಿರುವುದನ್ನು ಈ ಮೂಲಕ ಸ್ಥಿರೀಕರಿಸಲಾಗಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಆದೇಶವನ್ನು ಇಂದು ಅಂದರೆ 2004ನೇ ಇಸ್ವಿಯ ಅಕ್ಟೋಬರ್ ತಿಂಗಳ 15ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ಬೆರಳಚ್ಚು ಮಾಡಿಸಿ, ಬೆರಳಚ್ಚಿಸಿದ ಪ್ರತಿಯನ್ನು ತಿದ್ದಿದ ನಂತರ ಗಣಕೀಕೃತಗೊಳಿಸಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಕೆ.ಸಿ. ಹರಿದಾಸ್**

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.ನಂ. 1: ಎನ್. ರಾಮಚಂದ್ರ ಪಿ.ಎಸ್.ಐ.

ಪ್ರಾ.ಸಾ.ನಂ. 2: ಗೋವಿಂದ ನಾಗಪ್ಪ ನಾಯ್ಕ, ಪಿ.ಸಿ.

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

ಡಿ.ಡಬ್ಲ್ಯು. 1: ಈ.ಜೆ.ಎಂ.ಕೆಸ್ಟಿಲಿನೊ

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

| | | |
|---|---|---|
| ನಿಶಾನೆ ಪಿ 1 | : | ಫಿರ್ಯಾದಿ |
| ನಿಶಾನೆ ಪಿ 2 | : | ಸ್ವತ್ತಿನ ಪಟ್ಟಿ |
| ನಿಶಾನೆ ಪಿ 2 ಎ | : | ಸ್ವತ್ತಿನ ಪಟ್ಟಿಯ ಮೇಲಿನ ಸಹಿ |
| ನಿಶಾನೆ ಪಿ 3 | : | ಪಂಚನಾಮೆ |
| ನಿಶಾನೆ ಪಿ 3 ಎ | : | ಪಂಚನಾಮೆ ಮೇಲಿನ ಫಿರ್ಯಾದುದಾರರ ಸಹಿ |
| ನಿಶಾನೆ ಪಿ 4 | : | ಮುಟ್ಟುಗೋಲು ವರದಿ |
| ನಿಶಾನೆ ಪಿ 5 | : | ರಾಸಾಯನಿಕ ವಿಶ್ಲೇಷಣಾ ವರದಿ |
| ನಿಶಾನೆ ಪಿ 5 ಎ | : | ರಾಸಾಯನಿಕ ವಿಶ್ಲೇಷಣಾ ವರದಿಯ ಮೇಲಿನ ಸಹಿ |

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

ಇಲ್ಲಾ

**ಕೆ.ಸಿ. ಹರಿದಾಸ್**

ಪಿ.ಆರ್. 1525 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಗೌರವಾನ್ವಿತ ಘನ 10ನೇ ಅಪರ ಮುಖ್ಯ ಮಹಾನಗರ ದಂಡಾಧಿಕಾರಿಯವರ ನ್ಯಾಯಾಲಯ, ಬೆಂಗಳೂರು ನಗರ**
**ದಿನಾಂಕ: 13ನೇ ಅಕ್ಟೋಬರ್ 2004**

**ವಿಷಯ:** ಮಹದೇವಪುರ ಪೊಲೀಸ್ ಠಾಣೆಯಲ್ಲಿ ವಾರಸುದಾರರಿಲ್ಲದ ವಾಹನಗಳ ಪತ್ತೆಗಾಗಿ

**ಉಲ್ಲೇಖ:** ನಂ. ಎಂ.ಡಿ.ಪಿ.ಎಸ್./ಸಿ.ಸಿ/ /04, ದಿನಾಂಕ. 13/10/04.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಮಹದೇವಪುರ ಪೊಲೀಸ್ ಠಾಣೆಯಲ್ಲಿ ವಾರಸುದಾರರು ಇಲ್ಲದ ವಾಹನಗಳನ್ನು ಅಮಾನತ್ತುಪಡಿಸಿಕೊಂಡು ಠಾಣಾ ಸ್ವತ್ತಿನ ಪಟ್ಟಿಯಲ್ಲಿ ನಮೂದಿಸಿರುತ್ತದೆ. ಸದರಿ ವಾಹನಗಳ ವಾರಸುದಾರರ ಪತ್ತೆಗಾಗಿ ಪತ್ತೆ ಕಾರ್ಯಗಳನ್ನು ಕೈಗೊಂಡಿರುತ್ತದೆ. ಪತ್ತೆಗಾಗಿ ಸಿಬ್ಬಂದಿಯವರನ್ನು ನೇಮಕ ಮಾಡಲಾಗಿತ್ತು. ವಾಹನಗಳ ಪತ್ತೆ ವಿವರಗಳಿಗಾಗಿ ನಗರದ ಎಲ್ಲಾ ಪೊಲೀಸ್ ಠಾಣೆಗಳಿಗೆ ಸುತ್ತೋಲೆ ಮನವಿಗಳನ್ನು ಕಳುಹಿಸಿದ್ದು, ಈ ಬಗ್ಗೆ ಸಹ ಮಾಹಿತಿ ಸಿಗದೇ ವಾಹನಗಳ ವಾರಸುದಾರರು ಪತ್ತೆಯಾಗಿರುವುದಿಲ್ಲ. ಸದರಿ ವಾಹನಗಳ ವಾರಸುದಾರರ ಪತ್ತೆಗಾಗಿ ವಾಹನಗಳ ವಿವರಗಳನ್ನು ಈ ಕೆಳಗೆ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

ಅಮಾನತ್ತುಪಡಿಸಿಕೊಂಡಿರುವ ಸದರಿ ವಾಹನಗಳ ವಿವರಗಳು ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ಪಿ.ಎಫ್. ನಂ. | ಮೊ.ಸಂ. ಕಲಂ ಮತ್ತು ಸಿಮಿಸ್ ನಂ. | ಅಮಾನತ್ತುಪಡಿಸಿದ ದಿನಾಂಕ | ಮಾಲುಗಳ ವಿವರ |
|---|---|---|---|---|
| 1. | 78/98 | ಸಿಮಿಸ್ ನಂ.400/98 | 14-06-98 | ಬಜಾಜ್ ಸ್ಕೂಟರ್ ನಂ. CTM 647<br>ಇಂಜಿನ್ ನಂ. WOSL023077<br>ಚಾಸಿಸ್ ನಂ. C-023793,<br>ತಿಳಿ ನೀಲಿ ಬಣ್ಣ |
| 2. | 46/99 | ಮೊ.ಸಂ.146/99<br>ಕಲಂ. 379 ಐಪಿಸಿ | 06-08-99 | ಬಜಾಜ್ ಸ್ಕೂಟರ್ ನಂ. ಇಲ್ಲಾ<br>ಇಂಜಿನ್ ನಂ. ಇಲ್ಲಾ<br>ಚಾಸಿಸ್ ನಂ. 06R9655364<br>ಮೆಟಾಲಿಕ್ ಬಣ್ಣ |
| 3. | 52/99 | ಮೊ.ಸಂ.146/99<br>ಕಲಂ. 379 ಐಪಿಸಿ | 08-08-99 | ಟಿವಿಎಸ್. ನಂ. ಇಲ್ಲಾ<br>ಇಂಜಿನ್ ನಂ. A305M754489<br>ಚಾಸಿಸ್ ನಂ. A311F823579,<br>ಬ್ರೌನ್ ಬಣ್ಣ |
| 4. | 04/00 | ಮೊ.ಸಂ. 188/00<br>ಕಲಂ. 457-380 ಐಪಿಸಿ | 18-01-00 | ಯಮಹಾ ಮೋಟಾರ್ ಸೈಕಲ್ ನಂ. AP-13-8304<br>ಇಂಜಿನ್ ನಂ. ILI 376342<br>ಚಾಸಿಸ್ ನಂ. ILI 376342<br>ಕಪ್ಪು ಬಣ್ಣ |
| 5. | 18/01 | ಮೊ.ಸಂ. 51/99<br>ಕಲಂ. 379 ಐಪಿಸಿ | 23-03-01 | ಬಜಾಜ್ ಸ್ಕೂಟರ್ ನಂ. CAN 2354<br>ಇಂಜಿನ್ ನಂ. 638<br>ಚಾಸಿಸ್ ನಂ. ಇಲ್ಲಾ<br>ಸಿಮೆಂಟ್ ಬಣ್ಣ |
| 6. | 28/02 | ಮೊ.ಸಂ. 70/99<br>ಕಲಂ. 41 Cl(2) r/w 109 cr.pc | 10-04-02 | ಯಮಹ ಮೋಟಾರು ಸೈಕಲ್ ನಂ. CTL 6601<br>ಇಂಜಿನ್ ನಂ. TO-1040766<br>ಚಾಸಿಸ್ ನಂ. PL-1040766.<br>ಕಪ್ಪು ಬಣ್ಣ |
| 7. | 42/04 | ಸಿಮಿಸ್ ಸಂ.316/04 | 27-07-04 | ಮಾರುತಿ ಕಾರ್ ನಂ. KA-04 P 2302<br>ಇಂಜಿನ್ ನಂ. FBBINI 524211<br>ಚಾಸಿಸ್ ನಂ. SB308IN 2090938,<br>ಬಿಳಿಯ ಬಣ್ಣ |
| 8. | 43/04 | ಸಿಮಿಸ್ ನಂ. 319/04 | 28-07-04 | ಅಂಬಾಸಿಡರ್ ಕಾರ್ ನಂ. WBF 609<br>ಇಂಜಿನ್ ನಂ. 06A2203<br>ಚಾಸಿಸ್ ನಂ. AMBOII-1114486<br>ನೀಲಿ ಬಣ್ಣ |

ಪಿ.ಆರ್. 1527 10ನೇ ಅಪರ ಮುಖ್ಯ ಮಹಾನಗರ ದಂಡಾಧಿಕಾರಿಗಳು, ಬೆಂಗಳೂರು.

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ.ನಂ. 5309, ಬೆಂಗಳೂರು**

**ಅಧಿಸೂಚನೆ ಸಂಖ್ಯೆ: ಕೃಮಾಇ/09/ಚುನಾವ/2002, ದಿನಾಂಕ: 27ನೇ ಅಕ್ಟೋಬರ್ 2004**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಕಾಯಿದೆ, 1966ರ ಪ್ರಕರಣ 102 ಹಾಗೂ ನಿಯಮಾವಳಿಗಳು, 1968ರ ನಿಯಮ 88ಐ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು, ಈ ಕೆಳಕಂಡ ಜಿಲ್ಲೆಯಿಂದ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಈ ಕೆಳಕಂಡಂತೆ ಪ್ರಕಟಿಸುತ್ತೇನೆ.

| ಕ್ರ. ಸಂ. | ಜಿಲ್ಲೆಯ ಹೆಸರು | ಆಯ್ಕೆಯಾದ ಸದಸ್ಯರ ಹೆಸರು |
|---|---|---|
| 1. | ಮಂಡ್ಯ | ಶ್ರೀ ಕೆ.ಎಸ್. ಪಾಪೇಗೌಡ,<br>ಅಧ್ಯಕ್ಷರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ನಾಗಮಂಗಲ. |

**ಸೈಯದ್ ಜಮೀರ್ ಪಾಷಾ**
ಪಿ.ಆರ್. 1528 ನಿರ್ದೇಶಕರು.

**IN THE COURT OF ADDITIONAL REGISTRAR OF CO-OPERATIVE SOCIETIES (INDL & MISC)**
**BANGALORE - 560 052**
**DIS No. A(I/M) DIS/D7/978/2003-2004**
**Present: Sri B. Nagaraja Msc.LLB.**
**Additional Registrar of Co-op. Societies. (Indl. and Misc).**

**PETITIONER**
Secretary,
Karnataka Rajya Kaigarika Sahakara Bank
Niyamitha No. 11, Bull Temple Road,
Basavanagudi, Bangalore - 560 004.

Vs

**RESPONDENT**
1. M/s Swathi Feeds
   Abbigeri Oil mill
   Compound, Gadag by its Partners.
2. Sri Manjunatha,
   S/o Basappa Abbigeri, partner,
   M/s Swathi Feeds, CTS No. 3770/8,
   Abbigeri Compound, Cotton,
   Market Road, Gadag.
3. Sri Kotresh, S/o Manjunatha Abbigeri,
   Compound, Cotton Market Road,
   Gadag.
4. Smt Mangala W/o Manjunatha Abbigeri Old Sharaff Bazar, Gadag, All are residing at old Sharaff Bazar, Gadag, Gadag District.

**CONFIRMATION OF NOTICE OF CONDITIONAL ATTACHMENT OF IMMOVABLE PROPERTIES UNDER SECTION 103 OF THE KARNATAKA CO-OPERATIVE SOCIETIES ACT 1959**

1. Whereas, the Petitioner has filed the above dispute u/s 70 of the Karnataka co-operative Societies act 1959 for recovery of a sum of Rs. 24,00,713-00 along with further interest from the respondents. The dispute is taken on file under Dispute No.A(I&M)DIS/D7/978/2003-2004. The same is referred under section 71(1) of Karnataka Co-op. Societies Act 1959, for disposal to Assistant Registrar of co-operative Societies Dharwad which is pending adjudication and the file is called for from the arbitrator for issuing this notice.

2. Whereas it is brought to my notice by the petitioner Bank by an application filed under section 103 of the Karnataka co-operative Societies Act 1959, that the Respondent are contemplating to convey/alienate or dispose the immovable properties belonging to the respondents.

3. Whereas the Petitioner Bank has further stated that if the Respondent are not prevented from doing so, the petitioner Bank will be left with no means to recover the amount even if any award/decree is obtained against the Respondents.

4. Whereas, I am fully convinced that the disposal of Schedule property of the Respondents would defeat or delay the enforcement or execution of any order/decree that may be passed against the Respondents. I had ordered to issue notice of conditional attachment on 17-05-2004 informing the respondents that if they desire to have the conditional attachment raised, they should furnish cash security to the extent of Rs. 24,01,000/- by depositing the said amount in the petitioner Co-operative Bank in the name of Additional Registrar of Co-operative Societies (Indl. & Misc,) Bangalore under suspense account and produce the original receipt/Challan issued thereon to this office on or before 24-07-2004 without fail and further informed that if they fail to furnish the cash security as ordered above within the stipulated period, this conditional attachment will be confirmed as made absolute.

5. The case was taken up for hearing on 24-7-2004, the petitioner has filed an application under order 6 rule 17 read with section 151 of CPC accompanying with memorandum of facts wherein he requested to modify the extent of land mentioned in the notice dated 17-05-2004 the same was considered and notice of corrigendum was issued.

6. As it could be seen from the records that the notices issued to the respondents were served on them and the respondents have not taken any steps to file objection to the notice. I am of the opinion to confirm the conditional attachment notice dated 17.5.2004 and 24.7.2004. Therefore, I pass the following order.

**ORDER**

Under the circumstances explained above and in exercise of powers rested in me under section 103 of the Karnataka co-operative societies Act, 1959, as conferred by the Government Notification No.

CMW/69/CLM/2001, dated 21-10-2001, I, B. Nagaraja, Additional Registrar of co-operative Societies (Indl & Misc.,) Bangalore do here by attach the movable/immovable properties of the respondent's as mentioned in the conditional attachment notice dated 17-05-2004 & 24-07-2004 pending disposal of this case.

**SCHEDULE OF PROPERTY**

1. All that piece and parcel of the agricultural land measuring 11.05 acres situated at Kalasapura village, Gadaga Taluk, Gadag District.
2. All the piece and parcel of the agricultural lands situated in Gadag Town
   a) Sy. No. 204/B, Plot No. 11, measuring 2 acres
   b) Sy. No. 204/B, Plot No. 12, measuring 2 acres $1^3/_4$ guntas
   c) Sy. No. 204/B, Plot No. 13, measuring 3 acres $10^3/_4$ guntas
   d) Sy. No. 204/B, Plot No. 14, measuring 7 acres $5^1/_2$ guntas
   e) Sy. No. 204/B, Plot No. 15, measuring 1 acres $7^1/_2$ guntas
   f) Sy. No. 204/B, Plot No. 16, measuring 1 acres $7^1/_2$ guntas
   g) Sy. No. 204/B, Plot No. 17, measuring 1 acres $7^1/_2$ guntas
   h) Sy. No. 204/B, Plot No. 18, measuring 1 Acres $7^1/_2$ guntas
   i) Sy. No. 204 B, Plot No. 24, measuring $13^1/_4$ guntas

Given under my hand and Seal this the 20th day of Sep 2004.

P.R. 1529 Additional Registrar of Coop.societies (Indl. & Misc).

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, 3ನೇ ವಲಯ, ಬೆಂಗಳೂರು-18 ರವರ ನ್ಯಾಯಾಲಯದಲ್ಲಿ**

**ದಾವಾ ಅರ್ಜಿ ಸಂಖ್ಯೆ: ಎಆರ್‌ಬಿ-50: ದಾವಾ ಇತರೆ:4:03-04**

| | |
|---|---|
| **ವಾದಿ:** | **ಪ್ರತಿವಾದಿ:** |
| ವ್ಯವಸ್ಥಾಪಕರು, | ಬಸವರಾಜ, ಮಾರಾಟ ಗುಮಾಸ್ತರು |
| ಹೆನ್ನಾಗರ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ, | ಹೆನ್ನಾಗರ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್, |
| ಕಾಚನಾಯಕನಹಳ್ಳಿ ಆನೇಕಲ್ ತಾಲ್ಲೂಕು. | ಆನೇಕಲ್ ತಾಲ್ಲೂಕು ಕೇರಾಫ್ ಬಿನ್ ಲೇಟ್ ಚನ್ನಬಸಪ್ಪ ಬೊಮ್ಮಸಂದ್ರ, |
| | ಕೈಗಾರಿಕಾ ಪ್ರದೇಶ ಆನೇಕಲ್ ತಾಲ್ಲೂಕು. |

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.39,221-30 ಗಳನ್ನು ದಿನಾಂಕ 1998 ರಿಂದ ಶೇಕಡಾ 16 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವೆ ನಂ. ಎಆರ್‌ಬಿ-50:ದಾವಾ:ಇತರೆ: 4:2003-04 ರನ್ವಯ ಈ ನ್ಯಾಯಾಲಯವು ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಯು ಆತನ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು ಪರಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್ ಡಿಕ್ರಿ ನೀಡಿದ್ದರೂ ಸಹ ಸದರಿ ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯ ಜೊತೆ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ಕಂಡ ನೋಟಕ್ಕೆ ಕಂಡು ಬರುತ್ತಿದೆ. ಅಲ್ಲದೆ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ ಪರಭಾರೆ ಮಾಡದಂತೆ ತಡೆಯದೆ ಇದ್ದಲ್ಲಿ ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಬಹುದೆಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣ ಮನವರಿಕೆಯಾಗುತ್ತದೆ.

ಮೇಲ್ಕಂಡ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ : ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಜಿ.ಆರ್. ಲಿಂಗರಾಜು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು ಆದ ನಾನು ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 39,221-30 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ 25.9.04 ರೊಳಗಾಗಿ ಅಧಿಕೃತ ಚಲನ್ : ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಮೇಲ್ಕಂಡ ಆಸ್ತಿಯ ವಿವರ:**

ಬೆಂಗಳೂರು ನಗರ ಜಿಲ್ಲೆ ಆನೇಕಲ್ ತಾಲ್ಲೂಕು ಬೊಮ್ಮಸಂದ್ರ ಗ್ರಾಮ ಪಂಚಾಯಿತ್ತಿಗೆ ಸೇರಿದ ಆಸ್ತಿಯ ನಂ.37, ಜಂಜರು ನಂ.37, ಅಳತೆ 69 x 22, ನಿವೇಶನದಲ್ಲಿ ಕಟ್ಟಲಾಗಿರುವ ಮನೆ ಮ್ಯೂಟೇಷನ್ ರಿಜಿಸ್ಟರ್ ನಂ. 92 : 97-98 (ಒಂದು ಅಂತಸ್ತು) ಗಳಿಗೆ

**ಚೆಕ್ಕುಬಂದಿ**

| | | |
|---|---|---|
| ಪೂರ್ವಕ್ಕೆ | : | ರಸ್ತೆ |
| ಪಶ್ಚಿಮಕ್ಕೆ | : | ಅಡಪ್ಪನವರ ಸ್ವತ್ತು |
| ಉತ್ತರಕ್ಕೆ | : | ರಾಜಣ್ಣ |
| ದಕ್ಷಿಣಕ್ಕೆ | : | ಅಗದೂರಪ್ಪ |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ 30.8.04 ರಂದು ನೀಡಿರುತ್ತೇನೆ.

ಪಿ.ಆರ್. 1530 ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು-18 ರವರ ನ್ಯಾಯಾಲಯದಲ್ಲಿ**

**ದಾವಾ ಅರ್ಜಿ ಸಂಖ್ಯೆ: ಎಆರ್‌ಬಿ-50: ದಾವಾ : ಇತರೆ:7:2003-04**

| ವಾದಿ: | ಪ್ರತಿವಾದಿ: |
|---|---|
| ಮ್ಯಾನೇಜರ್<br>ಹೆನ್ನಾಗರ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ,<br>ಕಾಚನಾಯಕನಹಳ್ಳಿ ಆನೇಕಲ್ ತಾಲ್ಲೂಕು. | ಶ್ರೀ ಕೆ.ಎಸ್. ಮಹಂತೇಶ್ ಮಾಜಿ 4ನೇ ದರ್ಜೆ ನೌಕರರು,<br>ಹೆನ್ನಾಗರ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್,<br>ಕಾಚನಾಯಕನಹಳ್ಳಿ ಆನೇಕಲ್ ತಾಲ್ಲೂಕು ಕೇರಾಫ್ ಬಿನ್ ನಂಜುಂಡಪ್ಪ ಕಾಚನಾಯಕನಹಳ್ಳಿ (ವಿನಾಯಕನಗರ) ಹೆನ್ನಾಗರ ಅಂಚೆ, ಆನೇಕಲ್ ತಾಲ್ಲೂಕು. |

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.24,261-95 ಗಳನ್ನು ದಿನಾಂಕ 1998 ರಿಂದ ಶೇಕಡಾ 18 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವೆ ನಂ. ಆರ್‌ಬಿ-50: ದಾವಾ ಇತರೆ:7:2003-04 ರನ್ವಯ ಈ ನ್ಯಾಯಾಲಯವು ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಯು ಆತನ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು ಪರಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್ ಡಿಕ್ರಿ ನೀಡಿದ್ದರೂ ಸದರಿ ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯ ಜೊತೆ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ಕಂಡ ನೋಟಕ್ಕೆ ಕಂಡು ಬರುತ್ತಿದೆ. ಅಲ್ಲದೆ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ ಪರಭಾರೆ ಮಾಡದಂತೆ ತಡೆಯದೆ ಇದ್ದಲ್ಲಿ ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಬಹುದೆಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣ ಮನವರಿಕೆಯಾಗುತ್ತದೆ.

ಮೇಲ್ಕಂಡ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ : ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಿ.ಆರ್. ಲಿಂಗರಾಜು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು ಆದ ನಾನು ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 24,261-95 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ 25.9.04 ರೊಳಗಾಗಿ ಅಧಿಕೃತ ಚಲನ್ : ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ

ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಮೇಲ್ಕಂಡ ಆಸ್ತಿಯ ವಿವರ:**

ಬೆಂಗಳೂರು ನಗರ ಜಿಲ್ಲೆ ಆನೇಕಲ್ ತಾಲ್ಲೂಕು ಕಾಚನಾಯಕನಹಳ್ಳಿ ಹೆನ್ನಾಗರ ಗ್ರಾಮ ಪಂಚಾಯ್ತಿಗೆ ಸೇರಿದ ಆಸ್ತಿಯ ಅಳತೆ 60 x 40 ಜನತಾ ಸೈಟ್ ಬಂಜರು ನಂ. 90 ಆಸ್ತಿಯ ನಂ. 67/25

**ಚೆಕ್ಕುಬಂದಿ**

ಪೂರ್ವಕ್ಕೆ : ಗುಡ್ಡಪ್ಪನವರ ಆಸ್ತಿ
ಪಶ್ಚಿಮಕ್ಕೆ : ಸರ್ಕಾರಿ ಜಮೀನು
ಉತ್ತರಕ್ಕೆ : ಸಿದ್ದಗಂಗಪ್ಪ ಆಸ್ತಿ
ದಕ್ಷಿಣಕ್ಕೆ : ರಸ್ತೆ

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ 30.8.04 ರಂದು ನೀಡಿರುತ್ತೇನೆ.

ಪಿ.ಆರ್. 1531 ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು-18 ರವರ ನ್ಯಾಯಾಲಯದಲ್ಲಿ**

**ದಾವಾ ಅರ್ಜಿ ಸಂಖ್ಯೆ: ಎಆರ್‌ಬಿ-50: ದಾವಾ : ಇತರೆ:6:03-04**

**ವಾದಿ:**
ವ್ಯವಸ್ಥಾಪಕರು,
ಹೆನ್ನಾಗರ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ,
ಕಾಚನಾಯಕನಹಳ್ಳಿ ಆನೇಕಲ್ ತಾಲ್ಲೂಕು.

**ಪ್ರತಿವಾದಿ:**
ಕೆ.ಆರ್. ನಾಗೇಂದ್ರ ಕುಮಾರ್, ಮಾಜಿ ವ್ಯವಸ್ಥಾಪಕರು,
ಹೆನ್ನಾಗರ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್, ಕಾಚನಾಯಕನಹಳ್ಳಿ,
ಆನೇಕಲ್ ತಾ. ಕೇರಾಫ್ ಬಿನ್ ಲೇಟ್ ರಾಮಾಚಾರ್ ಸಮಗ್ರ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಅಭಿವೃದ್ಧಿ ಕಛೇರಿ ಕಟ್ಟಡ, ಆನೇಕಲ್ ಟೌನ್, ಆನೇಕಲ್.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.86,512-94 ಗಳನ್ನು ದಿನಾಂಕ 1998 ರಿಂದ ಶೇಕಡಾ 18 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವೆ ನಂ. ಎಆರ್‌ಬಿ-50:ದಾವಾ:ಇತರೆ:6: 2003-04 ರನ್ವಯ ಈ ನ್ಯಾಯಾಲಯವು ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಯು ಆತನ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು ಪರಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್ ಡಿಕ್ರಿ ನೀಡಿದ್ದರೂ ಸದರಿ ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯಲ್ಲಿ ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯ ಜೊತೆ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ಕಂಡ ನೋಟಕ್ಕೆ ಕಂಡು ಬರುತ್ತಿದೆ. ಅಲ್ಲದೆ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ ಪರಭಾರೆ ಮಾಡದಂತೆ ತಡೆಯದೆ ಇದ್ದಲ್ಲಿ ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಬಹುದೆಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣ ಮನವರಿಕೆಯಾಗುತ್ತದೆ.

ಮೇಲ್ಕಂಡ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ : ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಿ.ಆರ್. ಲಿಂಗರಾಜು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು ಆದ ನಾನು ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 86,512-84 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ 25.9.04 ರೊಳಗಾಗಿ ಅಧಿಕೃತ ಚಲನ್ : ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಮೇಲ್ಕಂಡ ಆಸ್ತಿಯ ವಿವರ:**

ಬೆಂಗಳೂರು ನಗರ ಜಿಲ್ಲೆ ಆನೇಕಲ್ ತಾಲ್ಲೂಕು ಆನೇಕಲ್ ಪುರಸಭೆಗೆ ಸೇರಿದ ಆಸ್ತಿಯ ಖಾತೆ ನಂ. 476:2030:28,2031:29,2032:30 ವಿಸ್ತೀರ್ಣ 1370.0 1295 ರಲ್ಲಿ ಆರ್.ಸಿ.ಸಿ. ಮಹಡಿ ಮನೆ 1090 X 1175 ಮನೆ ನಿವೇಶನದಲ್ಲಿ ಕಟ್ಟಲಾಗಿರುವ ವಾಸದ ಆರ್.ಸಿ.ಸಿ. ಮಹಡಿ ಮನೆ ವ್ಯಾಪಾರ ಮಳಿಗೆಗೆ ಇತ್ಯಾದಿಗಳಿಗೆ

**ಚೆಕ್ಕುಬಂದಿ**

| | | |
|---|---|---|
| ಪೂರ್ವಕ್ಕೆ | : | ಖಾಲಿ ಜಾಗ |
| ಪಶ್ಚಿಮಕ್ಕೆ | : | ರೇಷ್ಮೆ ಇಲಾಖೆ ಕಟ್ಟಡ |
| ಉತ್ತರಕ್ಕೆ | : | ರಸ್ತೆ |
| ದಕ್ಷಿಣಕ್ಕೆ | : | ಬೇರೆಯವರ ಸ್ವತ್ತು |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ 30.8.04 ರಂದು ನೀಡಿರುತ್ತೇನೆ.

ಪಿ.ಆರ್. 1532 ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು-18 ರವರ ನ್ಯಾಯಾಲಯದಲ್ಲಿ**

**ದಾವಾ ಸಂಖ್ಯೆ: ಎಆರ್‌ಬಿ-50: ದಾವಾ : ಇತರೆ:5:03-04**

| **ವಾದಿ:** | **ಪ್ರತಿವಾದಿ:** |
|---|---|
| ವ್ಯವಸ್ಥಾಪಕರು, | ಎಂ. ಮುನಿರಾಜು, ಮಾಜಿ ಮಾರಾಟ ಗುಮಾಸ್ತರು |
| ಹೆನ್ನಾಗರ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ, | ಹೆನ್ನಾಗರ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್, |
| ಕಾಚನಾಯಕನಹಳ್ಳಿ ಆನೇಕಲ್ ತಾಲ್ಲೂಕು. | ಕಾಚನಾಯಕನಹಳ್ಳಿ, ಆನೇಕಲ್ ತಾಲ್ಲೂಕು, ಕೇರಾಫ್ ಬಿನ್ ಮುಗಪ್ಪ, ಬಸ್ವಹಳ್ಳಿ ಚಂದಾಪುರ ಅಂಚೆ ಆನೇಕಲ್ ತಾಲ್ಲೂಕು. |

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 103ರ ರೀತ್ಯಾ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.2,92,371-00 ಗಳನ್ನು ದಿನಾಂಕ 1998 ರಿಂದ ಶೇಕಡಾ 18 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವೆ ನಂ. ಎಆರ್‌ಬಿ-50:ದಾವಾ:ಇತರೆ:5: 2003-04 ರನ್ವಯ ಈ ನ್ಯಾಯಾಲಯವು ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಯು ಆತನ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು ಪರಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್ ಡಿಕ್ರಿ ನೀಡಿದ್ದರೂ ಸದರಿ ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯ ಕಲಂ 103ರ ಅರ್ಜಿಯ ಜೊತೆ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ಕಂಡ ನೋಟಕ್ಕೆ ಕಂಡು ಬರುತ್ತಿದೆ. ಅಲ್ಲದೆ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ ಪರಭಾರೆ ಮಾಡದಂತೆ ತಡೆಯದೆ ಇದ್ದಲ್ಲಿ ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಬಹುದೆಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣ ಮನವರಿಕೆಯಾಗುತ್ತದೆ.

ಮೇಲ್ಕಂಡ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ : ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಿ.ಆರ್. ಲಿಂಗರಾಜು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು ಆದ ನಾನು ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 2,92,371-00 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ 25.9.04 ರೊಳಗಾಗಿ ಅಧಿಕೃತ ಚಲನ್ : ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಮೇಲ್ಕಂಡ ಆಸ್ತಿಯ ವಿವರ:**

ಬೆಂಗಳೂರು ನಗರ ಜಿಲ್ಲೆ ಆನೇಕಲ್ ತಾಲ್ಲೂಕು ಬೊಮ್ಮಸಂದ್ರ ಗ್ರಾಮ ಪಂಚಾಯಿತ್ತಿಗೆ ಸೇರಿದ ಆಸ್ತಿಯ ನಂ.95:1, ಬಂಜರು ನಂ.134, ಅಳತೆ 20 X 30, ಮ್ಯೂಟೇಷನ್ ರಿಜಿಸ್ಟರ್ ನಂ. 44 : 96-97 ಗಳಿಗೆ

**ಚಿಕ್ಕುಬಂದಿ**

| | | |
|---|---|---|
| ಪೂರ್ವಕ್ಕೆ | : | ಮುನಿರೆಡ್ಡಿ ರವರ ಮನೆ |
| ಪಶ್ಚಿಮಕ್ಕೆ | : | ಎಲ್ಲಮ್ಮ ದೇವಸ್ಥಾನ |
| ಉತ್ತರಕ್ಕೆ | : | ರಸ್ತೆ |
| ದಕ್ಷಿಣಕ್ಕೆ | : | ಸೀನಪ್ಪನವರ ರಸ್ತೆ |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ 30.8.04 ರಂದು ನೀಡಿರುತ್ತೇನೆ.

ಪಿ.ಆರ್. 1533 ಸಹಕಾರ ಸಂಘಗಳ ಸಹಾಯಕ ನಿಬಂಧಕರು, 3ನೇ ವಲಯ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ವಿಷಯ:** ಸಮಾಪನಾ ಆದೇಶಿತ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಹುಂಚದಕಟ್ಟೆ, ತೀರ್ಥಹಳ್ಳಿ ತಾ: ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಆದೇಶ ನಂ. ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/19/2003-04/ದಿನಾಂಕ:31-5-2004.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಪತ್ರ ನಂ:ಎಆರ್-24/ಸಮಾಪನೆ/ರದ್ದತಿ/ಸಿಆರ್79/2004-05, ದಿನಾಂಕ:20-10-2004.

ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಹುಂಚದಕಟ್ಟೆ, ತೀರ್ಥಹಳ್ಳಿ ತಾ: ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವರ ಕಾರ್ಯಾಲಯದ ನೊಂದಣಿ ನಂ.30004/2001-02/ದಿನಾಂಕ:30-4-2002 ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ(1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ ತೀರ್ಥಹಳ್ಳಿ ತಾ: ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ:7-6-2004 ರಂದು ಪ್ರಭಾರ ವಹಿಸಿಕೊಂಡು ಸದಸ್ಯರ ಷೇರು ಹಣವನ್ನು ವಿಲೇ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಪಾಲು ಏನೂ ಇರುವುದಿಲ್ಲವೆಂದು ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ:12-10-2004ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಶಿವಮೊಗ್ಗ ಉಪ-ವಿಭಾಗದ ಸಹಾಯಕ ನಿಬಂಧಕರು, ಉಲ್ಲೇಖ(2)ರ ಪತ್ರದಲ್ಲಿ ನೊಂದಣಿ ರದ್ದತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ(2)ರಲ್ಲಿಯ ಶಿಫಾರಸ್ಸು ಅನ್ವಯ ಮತ್ತು ಸರ್ಕಾರದ ವಿನಿಯೋಗಗಳು ಇಲ್ಲದ ಪ್ರಯುಕ್ತ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ನಂ.ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/19/2003-04, 1177, ದಿನಾಂಕ: 28ನೇ ಅಕ್ಟೋಬರ್ 2004**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ/69/ಸಿಎಲ್‌ಎಂ/2000/ದಿನಾಂಕ:21.11.2001ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಹುಂಚದಕಟ್ಟೆ ತೀರ್ಥಹಳ್ಳಿ ತಾ: ಇದರ ನೊಂದಣಿ ನಂ.30004/2001-02/ದಿನಾಂಕ:30-4-2002 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗರವವ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ:28ನೇ ಅಕ್ಟೋಬರ್ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್. 1534 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ ಕಾರವಾರ ರವರ ನ್ಯಾಯಾಲಯದಲ್ಲಿ**

**ನಂ.ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/588/95-96, ದಿನಾಂಕ: 20ನೇ ಅಕ್ಟೋಬರ್ 2004**

**ಉಪಸ್ಥಿತರು** : ಶ್ರೀ ಕೆ.ಸಿ. ಹರಿದಾಸ್, ಕೆ.ಇ.ಎಸ್.
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದುದಾರರು** : ಶ್ರೀ ಎಸ್.ಎಂ. ನಾಯ್ಕ, ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ಕಡಲುಪಡೆ ಕಾರವಾರ.
(ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ)

**ವಿರುದ್ಧ**

**ಅರ್ಜಿದಾರ** : ಶ್ರೀ ರತನ್ ವೆಂಕಟೇಶ ಹರಿಕಂತ್ರ, ವಾಸ: ಪ್ರಧಾನ ಅಂಚೆ ಕಛೇರಿಯ ಹತ್ತಿರ, ಕಾರವಾರ.
(ಶ್ರೀ ಎ.ಡಿ. ಚಿಪ್ಕರ್, ವಕೀಲರು, ಕಾರವಾರ ಇವರು ಪ್ರತಿನಿಧಿಸಿರುತ್ತಾರೆ)

**ತೀರ್ಪು**

1. ಈ ಆರೋಪಣಾ ಪಟ್ಟಿಯನ್ನು ಪೊಲೀಸ್ ಉಪ ನಿರೀಕ್ಷಕರು, ಚಿತ್ತಾಕುಲಾ ಪೊಲೀಸ್ ಠಾಣೆ ಇವರು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32 ಮತ್ತು 34 ರಡಿಯಲ್ಲಿ ಸಲ್ಲಿಸಿ ಜಪ್ತಿಯಾದಂತಹ ಸ್ವತ್ತುಗಳನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

2. ಈ ಪ್ರಕರಣದ ಫಿರ್ಯಾದುದಾರರು ದಿನಾಂಕ: 18.5.1996 ರಂದು ತನಗೆ ದೂರವಾಣಿ ಮೂಲಕ ದೊರೆತಂತಹ ಖಚಿತವಾದ ವರ್ತಮಾನದ ಮೇರೆಗೆ ತನ್ನ ಸಿಬ್ಬಂದಿಗಳು ಹಾಗೂ ಪಂಚರರೊಂದಿಗೆ “ದೇವಗಡ” ಎಂಬ ಹೆಸರಿನ ಪೊಲೀಸ್ ಲಾಂಚ್ ಮುಖಾಂತರ ಅರಬ್ಬಿ

ಸಮುದ್ರದಲ್ಲಿ ಗಸ್ತು ತಿರುಗುತ್ತಾ, ಕರ್ಮಗುಡ ಹಾಗೂ ದೇವಗಡದ ಮಧ್ಯದಲ್ಲಿ ಮರೆಯಾಗಿ ನಿಂತು ಕಾಯ್ದು ಕುಳಿತಿದ್ದಾಗ, ಗೋವಾ ರಾಜ್ಯದ ಪೊಳೆಂ ಕಡೆಯಿಂದ ಅರಬ್ಬಿ ಸಮುದ್ರದ ಮೂಲಕ 4 ಜನರು ಯಮಹ ಮಶೀನು ಹೊಂದಿದಂತಹ ನಾಡದೋಣಿಯನ್ನು ಚಲಾಯಿಸಿಕೊಂಡು ಬರುತ್ತಿದ್ದವರನ್ನು ನೋಡಿ ತಮ್ಮ ಲಾಂಚ್‌ನ್ನು ತೆಗೆದುಕೊಂಡು ಹೋಗಿ ದೋಣಿಯನ್ನು ಹಿಂಬಾಲಿಸಿದಾಗ, ಅವರು ತಮ್ಮಿಂದ ತಪ್ಪಿಸಿಕೊಳ್ಳಲು ಮಶೀನಿನ ವೇಗವನ್ನು ತೀವ್ರಗೊಳಿಸಿ ಪುನಃ ಪೊಳೆಂ ತರ್ಫಿಗೆ ಹೋಗುತ್ತಾ ಆ ದೋಣಿಯಲ್ಲಿ ಇದ್ದ ಸರಾಯಿ ತುಂಬಿದ ಸುಮಾರು 4050 ಬಾಟ್ಲಿಗಳ ಮೂಟೆಗಳನ್ನು ಎಸೆದರೆಂದೂ ಆದರೂ ಸಹ ಅವರನ್ನು ಬೆನ್ನಟ್ಟಿ ಹಿಡಿಯಲಾಗಿ, 5 ಜನ ಆರೋಪಿಗಳ ಪೈಕಿ ಒಬ್ಬಾತನು ಸಮುದ್ರದಲ್ಲಿ ಜಿಗಿದು ಈಜಾಡಿಕೊಂಡು ಹೋದನೆಂದೂ, ಹಿಡಿಯಲು ಪ್ರಯತ್ನಪಟ್ಟರೂ ಸಿಗಲಿಲ್ಲವೆಂದೂ, ಉಳಿದ 4 ಜನ ಆರೋಪಿಗಳು ತಮ್ಮ ಕೈಗೆ ಸಿಕ್ಕರೆಂದೂ, ದೋಣಿಯಲ್ಲಿ ಇದ್ದ ಮಾಲಿನ ಬಗ್ಗೆ ಪರಿಶೀಲಿಸಲಾಗಿ ಅದರಲ್ಲಿ 375 ಮಿ.ಲೀನ. 36 "ರುಬಿಸ್" ಕೋಕೋನಟ್ ಫೆನ್ನಿಯ ಬಾಟ್ಲಿಗಳು ಪ್ಲಾಸ್ಟಿಕ್ ಚೀಲದಲ್ಲಿ ತುಂಬಿದ್ದು ಕಂಡುಬಂದವೆಂದೂ, ಇವುಗಳ ಪೈಕಿ ರಾಸಾಯನಿಕ ಪರೀಕ್ಷೆಗಾಗಿ ಒಂದು ಬಾಟ್ಲಿಯನ್ನು ಪ್ರತ್ಯೇಕವಾಗಿ ಮಾದರಿಗೆ ತೆಗೆಯಲಾಯಿತೆಂದೂ, ಆರೋಪಿತರನ್ನು ಹಾಗೂ ದೋಣಿಯನ್ನು ಹಿಡಿಯುವಾಗ ತಮ್ಮ ಸಿಬ್ಬಂದಿಯವರಾದ ಎಂ.ಎಲ್.ಎಸ್.ಐ. ಎಸ್.ಆರ್. ತಾಮ್ಸೆ, ಇವರಿಗೆ ಎಂಕರ್ ಬಡಿದು ಅದರ ಕಬ್ಬಿಣದ ಹಲ್ಲುಗಳು ತಾಗಿ ಬಲಗಾಲಿನ ಮೊಣಗಂಟಿನ ಕೆಳಗೆ ಗಾಯವಾಗಿ ರಕ್ತ ಸೋರುತ್ತಿತ್ತೆಂದೂ, ಸದ್ರಿಯವರಿಗೆ ಪ್ರಥಮ ಚಿಕಿತ್ಸೆ ಸಲುವಾಗಿ ಪಿ.ಸಿ.406 ನೇಯವರ ಮುಖಾಂತರ ಕೂಡಲೇ ಜಿಲ್ಲಾ ಆಸ್ಪತ್ರೆಗೆ ಕಳುಹಿಸಲಾಯಿತೆಂದೂ, ಅನಂತರ ಸದ್ರಿ ದೋಣಿಯಲ್ಲಿ ಅಕ್ರಮವಾಗಿ ಗೋವಾ ರಾಜ್ಯದ ತಯಾರಿಕೆಯ ಮದ್ಯ ಹಾಗೂ ಫೆನ್ನಿಯ ಸೀಸೆಗಳನ್ನು ಸಾಗಿಸುತ್ತಿದ್ದ ಆರೋಪದ ಮೇಲೆ ಸದ್ರಿ ದೋಣಿ ಹಾಗೂ ಫೆನ್ನಿಯ ಸೀಸೆಗಳನ್ನು ಪಂಚನಾಮೆಯ ಮೂಲಕ ಜಪ್ತಿ ಮಾಡಿ ಅವುಗಳ ಪೈಕಿ ಒಂದು ಸೀಸೆಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಮಾದರಿ ತೆಗೆದು ಚಿತ್ತಾಕುಲಾ ಪೊಲೀಸ್ ಠಾಣೆಗೆ ಬಂದು ಕ.ಅ.ಕಾಯ್ದೆ ಕಲಂ 32 ಮತ್ತು 34ರ ಉಲ್ಲಂಘನೆಯಾದ ಬಗ್ಗೆ ಫಿರ್ಯಾದು ನೀಡಿದ ಪ್ರಕಾರ ಚಿತ್ತಾಕುಲಾ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 67/96, ದಿನಾಂಕ:18.5.96 ರಂತೆ ಗುನ್ನೆಯನ್ನು ದಾಖಲಿಸಿ, ಗುನ್ನೆಗೆ ಸಂಬಂಧಿಸಿದ ಪ್ರ.ಮಾ.ವರದಿ ಮತ್ತು ಪಂಚನಾಮೆಯ ದೃಢೀಕೃತ ನಕಲು ಹಾಗೂ ಸ್ವತ್ತಿನ ಪಟ್ಟಿಯನ್ನು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

3. ದಿನಾಂಕ: 24.5.96 ರಂದು ಶ್ರೀ ಎ.ಡಿ. ಚಿಪ್ಕರ್, ವಕೀಲರು, ಕಾರವಾರ ಇವರು ಈ ಪ್ರಾಧಿಕಾರದಲ್ಲಿ ತನ್ನ ಅರ್ಜಿಯನ್ನು ಸಲ್ಲಿಸಿ, ಪ್ರಕರಣದಲ್ಲಿ ಜಪ್ತಿಯಾದ ವಾಹನವು ಶ್ರೀ ರತನ ವೆಂಕಟೇಶ ಹರಿಕಂತ್ರ, ಸಾ:ಪ್ರಧಾನ ಅಂಚೆ ಕಛೇರಿಯ ಹಿಂದುಗಡೆ ಕಾರವಾರ ಇವರದಾಗಿದ್ದು, ಸದ್ರಿಯವರು ತನ್ನ ಯಮಹಾ ಮಶೀನ್ ಸಂಖ್ಯೆ:314219 ನೇದನ್ನು ಕೂಡ್ರಿಸಿದಂತಹ ಬೋಟನ್ನು ಮೀನುಗಾರಿಕೆಗಾಗಿ ಸಮುದ್ರದಲ್ಲಿ ಒಯ್ದಾಗ ಕರ್ತವ್ಯದಲ್ಲಿ ಇದ್ದಂತಹ ಪೊಲೀಸ್ ಸಿಬ್ಬಂದಿಗಳು ತಮ್ಮ ಅಧಿಕಾರವನ್ನು ತೋರ್ಪಡಿಸುವುದಕ್ಕಾಗಿ ಅರ್ಜಿದಾರನೊಂದಿಗೆ ಜಗಳ ಕಾಯ್ದು ಅನಧಿಕೃತವಾಗಿ ಬೋಟನ್ನು ಜಪ್ತಿ ಮಾಡಿ ಅರ್ಜಿದಾರರನ್ನು ಕಡಲು ಪಡೆ ಕಛೇರಿಗೆ ಕರೆದು ಆತನ ಮೇಲೆ ಸುಳ್ಳು ಪ್ರಕರಣ ದಾಖಲಿಸಿರುವುದಾಗಿ ತಿಳಿಸುತ್ತಾ, ಆತನ ಮೇಲೆ ಹೊರಿಸಿರುವ ಎಲ್ಲ ಆರೋಪಗಳನ್ನು ಅಲ್ಲಗಳೆದು ಬೋಟನ್ನು ಮುಂದಿನ ಆದೇಶದವರೆಗೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿದ್ದರು.

4. ಈ ಪ್ರಕರಣದಲ್ಲಿ ಜಪ್ತಿಯಾದಂತಹ ಬೋಟನ್ನು ಮತ್ತು ಮದ್ಯದ ವಸ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುವುದಕ್ಕಾಗಿ ಕ.ಅ. ಕಾಯ್ದೆ 1965ರ ಕಲಂ 43(ಬಿ) ಎ ಪ್ರಕಾರ ಕಾರಣಕೇಳಿ ನೋಟೀಸನ್ನು ದಿನಾಂಕ: 30.5.1996 ರಂದು ಅರ್ಜಿದಾರ/ಬೋಟಿನ ಮಾಲೀಕರಿಗೆ ಅದೇ ದಿನ ಜಾರಿ ಮಾಡಲಾಗಿ, ಅದಕ್ಕೆ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

5. ಈ ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/588/95-96, ದಿನಾಂಕ: 30.5.96 ರಂತೆ ಈ ಪ್ರಕರಣದಲ್ಲಿ ಜಪ್ತಿಯಾದಂತಹ ಬೋಟ್ ಮತ್ತು ಮಶೀನ್‌ಗೆ ರೂಪಾಯಿ 14,000/-ಗಳ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಕೆಲವು ಷರತ್ತುಗಳನ್ನು ವಿಧಿಸಿ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ನನ್ನ ಪೂರ್ವಾಧಿಕಾರಿಗಳು ಆದೇಶಿಸಿರುತ್ತಾರೆ. ಈ ಪ್ರಕರಣದಲ್ಲಿ ನೀಡಿರುವ ಬ್ಯಾಂಕ್ ಗ್ಯಾರಂಟಿಯ ಅವಧಿಯನ್ನು ವಿಸ್ತರಿಸುವಂತೆ ಬ್ಯಾಂಕಿನವರಿಗೆ ವಿನಂತಿಸಿಕೊಳ್ಳಲು ದಿನಾಂಕ:22.5.2002 ರಂದು ಅರ್ಜಿದಾರರಿಗೆ ಪತ್ರ ಬರೆಯಲಾಗಿ, ಸದ್ರಿಯವರು ಬ್ಯಾಂಕಿಗೆ ಹಾಜರಾಗಿ ವಿನಂತಿಸದಿದ್ದುದರಿಂದ ಅದರ ಅವಧಿಯನ್ನು ವಿಸ್ತರಿಸಲು ಸಾಧ್ಯವಾಗಿಲ್ಲವಾಗಿ ದಿನಾಂಕ:22.7.2002 ರಂದು ಮ್ಯಾನೇಜರ್ ಸಿಂಡಿಕೇಟ್ ಬ್ಯಾಂಕ್ ಇವರು ಈ ಕಛೇರಿಗೆ ಪತ್ರ ಬರೆದು ಮುಂದಿನ ಮಾರ್ಗದರ್ಶನವನ್ನು ಬಯಸಿದ್ದರಿಂದ ಅರ್ಜಿದಾರರಿಗೆ ಇನ್ನೊಂದು ಪತ್ರವನ್ನು ದಿನಾಂಕ:29.8.2002 ರಂದು ಬರೆದು ಬ್ಯಾಂಕಿಗೆ ಹಾಜರಾಗಿ ಬ್ಯಾಂಕ್ ಗ್ಯಾರಂಟಿಯ ಅವಧಿಯನ್ನು ವಿಸ್ತರಿಸುವಂತೆ ಸೂಚಿಸಲಾದರೂ ಸಹ ವಿಸ್ತರಿಸದಿದ್ದ ಕಾರಣಕ್ಕಾಗಿ ದಿನಾಂಕ:4.12.2002 ರಂದು ಸದ್ರಿ ಬ್ಯಾಂಕ್ ಗ್ಯಾರಂಟಿಯಲ್ಲಿನ ಹಣವನ್ನು ಡಿ.ಡಿ. ಮೂಲಕ ತರಿಸಿಕೊಂಡು ಅದನ್ನು ಭದ್ರತಾ ಠೇವಣಿಯಲ್ಲಿ ಜಮಾ ಮಾಡಿ ಇಡಲಾಗಿರುತ್ತದೆ.

6. ಪ್ರಕರಣದ ತನಿಖಾಧಿಕಾರಿಗಳು ದಿನಾಂಕ: 15.4.1998 ರಂದು ಈ ಪ್ರಾಧಿಕಾರಕ್ಕೆ ರಾಸಾಯನಿಕ ವಿಶ್ಲೇಷಣಾ ವರದಿಯ ನಕಲನ್ನು ಮುಂದಿನ ಕ್ರಮಕ್ಕಾಗಿ ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿನ ಮದ್ಯಸಾರದ ಅಂಶವು 60 ಸೆಂಟಿಗ್ರೇಡ್‌ಗಳಲ್ಲಿ ಶೇಕಡಾ 29.40 ವಿ/ವಿ ರಷ್ಟು ಇರುತ್ತದೆಯಾಗಿ ಹಾಗೂ ಇದು ಮಾನವ ಸೇವನೆಗೆ ಯೋಗ್ಯವಿರುವುದಿಲ್ಲವಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

7. ಪ್ರಾಧಿಕಾರದ ಆದೇಶ ಸಂಖ್ಯೆ:ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/588/1995-96 ದಿನಾಂಕ:21/05/1999 ರಂತೆ ಈ ಪ್ರಕರಣದಲ್ಲಿ ಜಪ್ತಿಯಾದ ಮದ್ಯದ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಇವು ಮಾನವನ ಸೇವನೆಗೆ ಯೋಗ್ಯವಿಲ್ಲದಿರುವ ಪ್ರಯುಕ್ತ ಸಿ.ಪಿ.ಐ. ಕದ್ರಾ ರವರ ಸಮಕ್ಷಮ ನಾಶಪಡಿಸಲು ಹಾಗೂ ಖಾಲಿ ಸೀಸೆಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಅಬಕಾರಿ ನಿರೀಕ್ಷಕರು, ಕಾರವಾರ ವಲಯ ಇವರಿಗೆ ಆದೇಶಿಸಲಾಗಿರುತ್ತದೆ.

8. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ(1) ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿಆರ್‌ಪಿಸಿ ಕಲಂ 207 ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕಲಂ 32 ಮತ್ತು 34 ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ, ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯು 1 ರಿಂದ 2ರ ವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ. 1 ರಿಂದ 2 ರವರೆಗಿನ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿದಾರನಾದ ಹನುಮಂತ ವಡ್ಡರ ಈತನು ನೋಟೀಸು ಜಾರಿಗೆ ಸಿಗದಿರುವುದು ಕಂಡುಬಂದಿದ್ದು, ಕೃಷ್ಣ ಥಾಕು ಕಟ್ಟಿಮನಿ ಈತನಿಗೆ ಕಳೆದ ನಾಲ್ಕು ವರ್ಷಗಳಿಂದ ನೋಟೀಸು ಜಾರಿಯಾಗುತ್ತಿದ್ದರೂ, ಹಾಜರಾಗದಿದ್ದುದರಿಂದ ಸದ್ರಿಯವರುಗಳ ಸಾಕ್ಷಿಯನ್ನು ಕೈಬಿಡಲಾಗಿದೆ.

9. ಪಿಡಬ್ಲ್ಯೂ-1 ಮತ್ತು 2 ನೇಯವರ ಹೇಳಿಕೆಯ ಆಧಾರದ ಮೇಲೆ ಮತ್ತು ಅಭಿಯೋಜನೆ ಪಕ್ಷದವರು ಸಲ್ಲಿಸಿರುವ ದಾಖಲೆಗಳ ಆಧಾರದ ಮೇಲೆ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪ್ರಕ್ರಿಯಾ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಡಿ.ಡಬ್ಲ್ಯು 1 ರಂತೆ ಪಡೆದುಕೊಳ್ಳಲಾಯಿತು.

10. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರ ಹಾಗೂ ಅರ್ಜಿದಾರರ ಪರವಾಗಿ ಶ್ರೀ ವೈ.ಎಸ್. ನಾಯ್ಕ, ವಕೀಲರು ಕಾರವಾರರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬಂತು.

**11. ವಿವಾದಾಂಶಗಳು:-**

1. ದಿನಾಂಕ:18.5.1996 ರಂದು ಮಧ್ಯಾಹ್ನ 13:00 ಗಂಟೆಗೆ ಕಾರವಾರ ತಾಲ್ಲೂಕಿನ ಚಿತ್ತಾಕುಲಾ ಗ್ರಾಮದ ವ್ಯಾಪ್ತಿಗೆ ಬರುವ ಅರಬ್ಬೀ ಸಮುದ್ರದ ಕುರ್ಮಗಡ ಮತ್ತು ದೇವಗಡದ ಮಧ್ಯದಲ್ಲಿ ಆರೋಪಿಗಳು ತಾವು ಚಲಾಯಿಸಿಕೊಂಡು ಬರುತ್ತಿದ್ದಂತಹ ಯಮಹಾ ಮಶೀನ್ ಕೂಡ್ರಿಸಿದ ದೋಣಿಯಲ್ಲಿ ಅಕ್ರಮವಾಗಿ ಗೋವಾ ರಾಜ್ಯದ ತಯಾರಿಕೆಯ ಮದ್ಯವನ್ನು ಸಾಗಿಸುತ್ತಿದ್ದಾಗ ಫಿರ್ಯಾದಿ ಕಡೆಯವರನ್ನು ನೋಡಿ ಕೆಲವು ಪೊಟ್ಲೆಗಳನ್ನು ಎಸೆದು ಕೊನೆಯಲ್ಲಿ ಫಿರ್ಯಾದಿ ಕಡೆಯವರು ಹಿಡಿದಾಗ ಆ ದೋಣಿಯಲ್ಲಿ 375 ಮಿ.ಲೀನ. 36 ರೂಬಿಸ್ ಕೋಕೋನೆಟ್ ಫೆನ್ನಿ ಬಾಟ್ಲಿಗಳನ್ನು ಅಕ್ರಮವಾಗಿ ಸಂಗ್ರಹಿಸಿದ್ದು ಕಂಡುಬಂದಿದ್ದು, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32 ಮತ್ತು 34ರಡಿ ಶಿಕ್ಷಾರ್ಹ ಅಪರಾಧವೆಸಗಿರುತ್ತಾರೆಯೇ ಹೇಗೆ?

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?

3. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

**ಉತ್ತರಗಳು**

12. ಅಂಶ 1:- ಸಕಾರಾತ್ಮಕವಾಗಿ
ಅಂಶ 2:- ನಕಾರಾತ್ಮಕವಾಗಿ
ಅಂಶ 3:- ಸಕಾರಾತ್ಮಕವಾಗಿ

**ಕಾರಣಗಳು**

13. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದ ಪ್ರಕರಣದ ಫಿರ್ಯಾದಿ ಸದಾನಂದ ಎಂ. ನಾಯ್ಕ, ಎ.ಎಸ್.ಐ. ರವರು ಈ ಪ್ರಾಧಿಕಾರದಲ್ಲಿ ದಿನಾಂಕ:29.09.1999 ರಂದು ಹಾಜರಾಗಿ ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ಈ ಘಟನೆ ಸಂಭವಿಸಿದ ನಂತರ ಕಡಲು ಪಡೆ ಕಛೇರಿಗೆ ಬಂದು ತಯಾರಿಸಿದ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರ ಪಾಟಿ ಸವಾಲಿನಲ್ಲಿ ತಾವು ಅಂದಾಜು 10:00 ಗಂಟೆಗೆ ಲಾಂಚನ್ನು ತೆಗೆದುಕೊಂಡು ಪತ್ತೆಗಾಗಿ ಹೊರಟೆವೆಂದೂ, ಅದಕ್ಕೂ ಮೊದಲು ಮ್ಯಾಜಿಸ್ಟ್ರೇಟ್‌ರಿಂದ ಸರ್ಚ್ ವಾರೆಂಟನ್ನು ಪಡೆಯಲಿಲ್ಲವೆಂದೂ, ಸಮುದ್ರದಲ್ಲಿ ಕನಿಷ್ಟ ಎರಡು ತಾಸುಗಳವರೆಗೆ ಕಾಯ್ದೆವೆಂದೂ, ಮಧ್ಯಾಹ್ನ 12:30ರ ಸುಮಾರಿಗೆ ನಾಡದೋಣಿ ಬರುವುದನ್ನು ನೋಡಿದೆವೆಂದೂ, ಪಂಚರನ್ನು ಕರೆದುಕೊಂಡು ಹೋಗಿರಲಿಲ್ಲವೆಂದೂ, ತುಳಸಿಖಾನ ಹತ್ತಿರ ದೋಣಿಯನ್ನು ಹಿಡಿದೆವೆಂದೂ, ಸುಮಾರು 15 ರಿಂದ 20 ಮಾರುಗಳಷ್ಟು ದೂರದಿಂದ ತಾವು ಅವರನ್ನು ನೋಡಿದೆವೆಂದೂ, ಒಬ್ಬನು ಮಾತ್ರ ಸಮುದ್ರಕ್ಕೆ ಜಿಗಿದು ದೇವಬಾಗದ ಕಡೆ ಪರಾರಿಯಾದನೆಂದೂ, ಓಡಿ ಹೋದವನನ್ನು ತಮ್ಮ ಸಿಬ್ಬಂದಿ ಸಮುದ್ರಕ್ಕೆ ಹಾರಿ ಹಿಡಿಯಲು ಪ್ರಯತ್ನಪಟ್ಟರೂ ಸಿಗಲಿಲ್ಲವೆಂದೂ, ದೋಣಿಯಲ್ಲಿ ಮಹಜರ ಬರೆಯಲು ಸಾಧ್ಯವಾಗದ ಕಾರಣ ಅಲ್ಲಿ ಬರೆಯಲಿಲ್ಲವೆಂದೂ, ಪಂಚನಾಮೆಯನ್ನು ಪೊಲೀಸ್ ಶೆಡ್ಡಿನಲ್ಲಿ ಸಂಜೆ 5:00 ಗಂಟೆಗೆ ಪ್ರಾರಂಭಿಸಿ, 6:05ಕ್ಕೆ ಮುಗಿಸಿದೆವೆಂದೂ, ಮಧ್ಯಾಹ್ನ 1:00 ಗಂಟೆಗೆ ದೋಣಿಯನ್ನು ಹಿಡಿದೆವೆಂದೂ, ಬರುವಾಗ ತಮ್ಮ ಸಿಬ್ಬಂದಿಯ ಪೈಕಿ ಒಬ್ಬನಿಗೆ ತೊಡೆಗೆ ಲಂಗರು ತಾಗಿ ತೀವ್ರ ಗಾಯವಾಗಿದ್ದರಿಂದ ಠಾಣೆಗೆ ಬರಲು ತಡವಾಗಿತ್ತೆಂದೂ, ಗಾಯವಾದ ಬಗ್ಗೆ ಪ್ರಮಾಣ ಪತ್ರವನ್ನು ಹಾಜರುಪಡಿಸಿಲ್ಲವೆಂದೂ, ಈ ಪ್ರಕರಣದಲ್ಲಿ ತಾನೇ ಫಿರ್ಯಾದುದಾರನಾಗಿದ್ದು, ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ತನ್ನ ಸಾಕ್ಷಿ ಆಗಿರುತ್ತದೆಂದೂ, ಮತ್ತು ಆರೋಪಿಗಳು ಖುಲಾಸೆಯಾಗಿರುತ್ತಾರೆಂದೂ, ಈ ಪ್ರಕರಣದಲ್ಲಿ ತಾನು ತನಿಖೆದಾರನಲ್ಲವೆಂದೂ, ಪಂಚದಾರರು ಅಬಕಾರಿ ಗುತ್ತಿಗೆದಾರರಲ್ಲಿ ಕೆಲಸ ಮಾಡುತ್ತಾರೆನ್ನುವುದು ತನಗೆ ಗೊತ್ತೆಂದೂ, ತಮಗೆ ಯಾವುದೇ ಕಾಲಕ್ಕೂ ಅಬಕಾರಿ ದಾಳಿಗೆ ಹೋದಾಗ ಗುತ್ತಿಗೆದಾರರೆ ಪಂಚರನ್ನು ನೀಡುತ್ತಾರೆನ್ನುವುದು ಸರಿಯಲ್ಲವೆಂದೂ, ದಿನಾಂಕ:18.5.1996 ರಂದು ತಾವು ಯಾವುದೇ ದಾಳಿಗೆ ಹೋಗಿಲ್ಲವೆನ್ನುವುದು ಸರಿಯಲ್ಲವೆಂದೂ, ಪೊಲೀಸ್ ದೇವಗಡ ಎಂಬ ಲಾಂಚ್‌ನಲ್ಲಿ ದಾಳಿ ನಡೆಸಿದ ಬಗ್ಗೆ ಪಂಚನಾಮೆಯಲ್ಲಿ ದಾಖಲಿಸಲಾಗಿದೆಯೆಂದೂ, ತಾವು ಆ ದಿನ ದಾಳಿಯಲ್ಲಿ ದೋಣಿ ಹಾಗೂ ಅದಕ್ಕಿದ್ದ ಮಶೀನನ್ನು ಜಪ್ತಿ ಮಾಡಿಲ್ಲವೆನ್ನುವುದು ಸರಿಯಲ್ಲವೆಂದೂ, ಹಾಗೂ ಅಂಕೆ-ಸಂಖ್ಯೆಗೋಸ್ಕರ ಸುಳ್ಳು ಪ್ರಕರಣ ದಾಖಲಿಸಿದ್ದೆವೆನ್ನುವುದು ಸರಿಯಲ್ಲವೆಂದೂ ಮತ್ತು ಯಾವುದೇ ಆರೋಪಿಯನ್ನು ಈ ಪ್ರಕರಣದಲ್ಲಿ ಹಿಡಿದಿಲ್ಲವೆನ್ನುವುದು ಸರಿಯಲ್ಲವೆಂದೂ, ನುಡಿದಿರುತ್ತಾರೆ. ನಂತರ ಈ ಪ್ರಕರಣದ ತನಿಖಾಧಿಕಾರಿಗಳಾದ ಆರ್. ಮಂಜುನಾಥ್, ಪಿ.ಎಸ್.ಐ. ಇವರು ದಿನಾಂಕ:18.10.2000 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಪರ ಸಾಕ್ಷ್ಯವನ್ನು ಪಿ.ಡಬ್ಲ್ಯೂ-2 ರಂತೆ ನುಡಿಯುತ್ತಾ, ತಾನು ದಿನಾಂಕ:24.8.1996 ರಂದು ಆಗಿನ ಪಿ.ಎಸ್.ಐ. ರವರಿಂದ ಈ ಪ್ರಕರಣದ ತನಿಖೆಯನ್ನು ವಹಿಸಿಕೊಂಡೆನೆಂದೂ, ದಿನಾಂಕ:15.10.1996 ರಂದು ರಾಸಾಯನಿಕ ವರದಿಯನ್ನು ಪಡೆದುಕೊಂಡು ಮಾನ್ಯ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿದೆನೆಂದೂ, ಪ್ರಾಧಿಕಾರಕ್ಕೆ ಸದ್ರಿ ವರದಿಯ ನಿಜ ನಕಲನ್ನು ಹಾಜರುಪಡಿಸಿದೆನೆಂದೂ, ಅದನ್ನು ಆಕ್ಷೇಪಣೆಗೊಳಪಟ್ಟು ಗುರ್ತಿಸಲಾಗಿದೆಯೆಂದು ನುಡಿದಿರುತ್ತಾರೆ. ನಂತರ ಎದುರುದಾರರ ಪರ ವಕೀಲರ ಪಾಟೀ ಸವಾಲಿನಲ್ಲಿ ತಾನು ಪರಿಶೀಲನೆ ಮಾಡದೇ ಹಿಂದಿನ ತನಿಖಾಧಿಕಾರಿಗಳಿಗೆ ಸಹಾಯ ಮಾಡುವ ಉದ್ದೇಶದಿಂದ ದೋಷಾರೋಪಣಾ ಪಟ್ಟಿ ಸಲ್ಲಿಸಿದ್ದೇನೆ ಎನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

**14. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಆರೋಪಿಯು ತಪ್ಪಿಸಿಕೊಳ್ಳಬಹುದೆಂಬ ಅಥವಾ ಮುದ್ದೆ ಮಾಲುಗಳನ್ನು ಪರಭಾರೆ ಮಾಡಬಹುದೆಂಬ ಅನುಮಾನವಿದ್ದಲ್ಲಿ ಅಂತಹ ಪ್ರಕರಣಗಳಲ್ಲಿ ಜಪ್ತಿ ವಾರೆಂಟ್ ಇಲ್ಲದೇ ಶೋಧನೆಗೈಯ್ಯಲು ಅನ್ವೇಷಣಾಧಿಕಾರಿಗಳಿಗೆ ಕ.ಅ. ಕಾಯ್ದೆ 1965ರ ಕಲಂ 54 ರಂತೆ ಅಧಿಕಾರವಿರುತ್ತದೆ. ಜಪ್ತಿ ವಾರೆಂಟ್‌ನ್ನು ಪಡೆದುಕೊಳ್ಳದಿದ್ದುದು ಫಿರ್ಯಾದುದಾರರು ಕ.ಅ.ಕಾಯ್ದೆ ಕಲಂ 52 ಮತ್ತು 54ರ ಉಲ್ಲಂಘನೆಯಾಗುತ್ತದೆಯೇ ಹೊರತು ಇದೇ ಕಾರಣವನ್ನಿಟ್ಟುಕೊಂಡು ಜಪ್ತಿಯನ್ನು ನಿರಾಕರಿಸಲು ಬರಲಾರದು ಈ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯದ

ವಿಭಾಗೀಯ ಪೀಠದ ತೀರ್ಪು ಐಎಲ್ಆರ್ 2004 ಕೆಎಆರ್ 527 (ಶ್ರೀ ಸೋಮನಾಥ ಕರೇಬೈಲ್ ವಿರುದ್ಧ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ) ರಲ್ಲಿ ಈ ಕೆಳಗಿನಂತೆ ಉಲ್ಲೇಖಿಸಲಾಗಿದೆ.

In the Case of a search of a vessel, raft, vehicle or animal, offender will undoubtedly have the opportunity to escape if the officer proposing to conduct the search were to approach a Magistrate to obtain a search warrant before actually conducting the search. That is so, particularly when illicit transport of excisable goods more often than not takes place at odd hours of the day and night to avoid detection, Such offenders are nabbed in the course of routine checks or on the basis of source information received by the excise authorities. To say that a search of a vehicle. Vessel, raft or animal can be conducted only after obtaining a warrant may therefore be unrealistic and may potentially defeat the very object underlying the excise legislation. That is because in the case of excisable goods that are in a state of motion, any delay which is implicit in an attempt to get a search warrant will give the Offender the opportunity to escape or destroy the evidence regarding the offence.

Failure to record in black and white what is obvious may not therefore by itself constitute an illegality as so to render the search or the subsequent proceedings based on the same illegal. Such failure may be only procedural irregularity not affecting the validity of the search.

The seizure of the goods while the same were in motion or were capable of being put into motion should sufficiently satisfy the conscience of the law that no prejudice on account of non recording of the reasons for not obtaining warrant has been caused.

ಸಮುದ್ರದಲ್ಲಿ ಕಾಯುತ್ತಿದ್ದ ಸಮಯದ ಬಗ್ಗೆ ಫಿರ್ಯಾದುದಾರರು ಸರಿಯಾಗಿಯೇ ವಿವರಿಸಿದ್ದು, ಘಟನೆಯು ಮಧ್ಯಾಹ್ನ 1:00 ಗಂಟೆಗೆ ಸಂಭವಿಸಿದ್ದರಿಂದ ಸುಮಾರು 15 ರಿಂದ 20 ಮಾರುಗಳಷ್ಟು ದೂರದಲ್ಲಿ ಫಿರ್ಯಾದಿ ಕಡೆಯವರು ಆರೋಪಿಗಳನ್ನು ನೋಡಿದಾಗ ಮಧ್ಯಾಹ್ನ 12:30 ಗಂಟೆಯ ಸಮಯವಾಗಿತ್ತೆಂದು ಈ ಸಾಕ್ಷಿದಾರರು ನುಡಿದಿರುವುದನ್ನು ಅಲ್ಲಗಳೆಯಲು ಬರಲಾರದು ಒಬ್ಬನು ಮಾತ್ರ ಸಮುದ್ರದಲ್ಲಿ ಜಿಗಿದು ಪರಾರಿಯಾದ ಬಗ್ಗೆ ಪಂಚನಾಮೆಯಲ್ಲಿಯೂ ಸಹ ನಮೂದಿಸಲಾಗಿದ್ದು ಹೀಗಾಗಿ ಈಜಲು ಬರುತ್ತಿದ್ದ ಆರೋಪಿಯು ತಪ್ಪಿಸಿಕೊಳ್ಳಲು ಪ್ರಯತ್ನಿಸಲಿಲ್ಲವೆಂಬುದನ್ನು ಅಲ್ಲಗಳೆಯಲು ಬರಲಾರದು. ಘಟನೆ ಜರುಗಿದ ಸ್ಥಳದಲ್ಲಿ ಪಂಚನಾಮೆ ಮಾಡಲು ಸಾಧ್ಯವಾಗದೇ ಕಡಲು ಪಡೆಯ ಲಾಂಚ್ ಶೆಡ್ಡಿಗೆ ಬಂದು ಜಪ್ತಿ ಪಂಚನಾಮೆಯನ್ನು ಸ್ಥಳೀಯ ಪಂಚರ ಸಮಕ್ಷಮ ಮಾಡಿದ ಬಗ್ಗೆ ಪಂಚನಾಮೆಯಲ್ಲಿ ನಮೂದಿಸಲಾಗಿದೆ. ಈ ಸಾಕ್ಷಿದಾರರು ಪಂಚನಾಮೆ ಬರೆಯಲು ಪ್ರಾರಂಭಿಸಿ ಅದನ್ನು ಮುಗಿಸಿದ ವೇಳೆಯನ್ನು ಹಾಗೂ ದೋಣಿಯನ್ನು ಹಿಡಿದ ವೇಳೆಯನ್ನು ಸಹ ಪಂಚನಾಮೆಯಂತೆ ಸರಿಯಾಗಿ ನುಡಿದಿರುತ್ತಾರೆ. ಅದೇ ರೀತಿ ಸಿಬ್ಬಂದಿಗೆ ಲಂಗರು ತಾಗಿ ಗಾಯವಾದ ಬಗ್ಗೆ ಸಹ ಪಂಚನಾಮೆಯಂತೆ ಸರಿಯಾಗಿಯೇ ನುಡಿದಿರುತ್ತಾರೆ. ಈ ಸಿಬ್ಬಂದಿಗೆ ಗಾಯವಾಗಿ ಆತನನ್ನು ಆಸ್ಪತ್ರೆಗೆ ದಾಖಲಿಸಿ ನಂತರ ಬಂದು ಪಂಚನಾಮೆ ತಯಾರಿಸುವಲ್ಲಿ ಸಾಕಷ್ಟು ಸಮಯಾವಕಾಶ ಬೇಕಾದ ಬಗ್ಗೆಯೂ ಸಹ ವಿವರಿಸಿದ್ದಾರೆ. ಹೀಗಾಗಿ ಪಂಚನಾಮೆಯ ಮೂಲಕ ನಡೆಸಿರುವ ಜಪ್ತಿಯನ್ನು ಅಲ್ಲಗಳೆಯಲು ಬರುವುದಿಲ್ಲ ಗಾಯವಾದ ಬಗ್ಗೆ ಗಾಯದ ಪ್ರಮಾಣ ಪತ್ರವನ್ನು ಹಾಜರುಪಡಿಸುವಂತೆ ಎದುರುದಾರರು ಸಮಯಾವಕಾಶವನ್ನು ನೀಡಿ ಕೇಳಿಕೊಳ್ಳಬೇಕಾಗಿತ್ತೇ ಹೊರತು ಸಾಕ್ಷಿ ನುಡಿಯಲು ಬಂದಾಗ ಅಕಸ್ಮಾತಾಗಿ ಗಾಯದ ಪ್ರಮಾಣ ಪತ್ರವನ್ನು ಕೇಳಿರುವುದು ಸಮಂಜಸವಲ್ಲ. ಪ್ರಕರಣಕ್ಕೆ ಸಂಬಂಧಿಸಿದಂತೆ ಆರೋಪಿಗಳನ್ನು ಅಭಿಯೋಜನೆಗೆ ಒಳಪಡಿಸಿರಲಿ ಅಥವಾ ಇಲ್ಲದಿರಲಿ ಅಂತಹ ಪ್ರಕರಣದಲ್ಲಿ ಒಳಗೊಂಡಂತಹ ಸ್ವತ್ತುಗಳನ್ನು ಕ.ಅ.ಕಾಯ್ದೆ 1965ರ ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದಿದೆ. ಅಲ್ಲದೇ ಕ್ರಿಮಿನಲ್ ನ್ಯಾಯಾಲಯದಲ್ಲಿ ಆರೋಪಿಯು ನಿರ್ದೋಷಿಯಾಗಿದ್ದಲ್ಲಿ ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲವೆಂದು ಈ ಬಗ್ಗೆ ಗೌರವಾನ್ವಿತ ಉಚ್ಚನ್ಯಾಯಾಲಯ ಬೆಂಗಳೂರು ರವರ ತೀರ್ಪು ಡಿ.ಎಸ್. ವಿಜಯ ಕುಮಾರ ವಿರುದ್ಧ ಡೆಪ್ಯೂಟಿ ಕನ್ಸರ್ವೇಟರ್ ಆಫ್ ಫಾರೆಸ್ಟ್ ಹಾಸನ (ಐಎಲ್ಆರ್-2002, ಕೆ.ಎ.ಆರ್1375) ನೇದರಲ್ಲಿಯೂ ಈ ಕೆಳಗಿನಂತೆ ತೀರ್ಪಾಗಿದೆ.

The Contention of the owner of the seized vehicle that non-filing of a criminal case or acquittal of the accused involved in illegal transport of forest produce, takes away the jurisdiction of the Authorised Officers to initiate confiscation proceedings under section 71A, hence confirmed the order of confiscation.

ಈ ಆದೇಶವನ್ನು ಈ ಪ್ರಕರಣದಲ್ಲಿ ಆಧಾರವಾಗಿಟ್ಟುಕೊಳ್ಳಲಾಗಿದೆ. ಅಬಕಾರಿ ಗುತ್ತಿಗೆದಾರರು ಇದೇ ಆರೋಪಿಗಳ ಮೇಲೆ ಇಲ್ಲಸಲ್ಲದ ಆರೋಪವನ್ನು ಹೊರೆಸಿ ಗುನ್ನೆ ದಾಖಲಿಸಲು ಪೊಲೀಸರ ಮೇಲೆ ಒತ್ತಡ ಹೇರಿದ್ದಾಗಿದ್ದಲ್ಲಿ ಅಬಕಾರಿ ಗುತ್ತಿಗೆದಾರರಿಗೂ ಮತ್ತು ಆರೋಪಿಗಳಿಗೂ ಇರುವಂತಹ ವೈಯಕ್ತಿಕ ದ್ವೇಷಗಳೇನೆಂಬುವುದರ ಬಗ್ಗೆ ಎದುರುದಾರರ ಪಕ್ಷದವರು ವಿವರಿಸಿಲ್ಲ. ಇನ್ನಿತರ ಪ್ರಕರಣಗಳಿಗೂ ಸರಾಯಿ ಗುತ್ತಿಗೆದಾರರ ಕಡೆಯವರೇ ಪಂಚರಾಗುತ್ತಾರೆನ್ನುವುದರ ಬಗ್ಗೆ ಯಾವುದೇ ದಾಖಲೆಗಳಿರುವುದಿಲ್ಲ. ಆ ದಿನ ದಾಳಿ ನಡೆಸದೇ ದೋಣಿ ಹಾಗೂ ಅದಕ್ಕಿದ್ದ ಮಶೀನನ್ನು ಜಪ್ತಿ ಮಾಡಿಲ್ಲದಿದ್ದಲ್ಲಿ ಮಧ್ಯಂತರ ವಶಕ್ಕೆ ಅರ್ಜಿದಾರ ಬಿಡಿಸಿಕೊಂಡು ಹೋದ ದೋಣಿ ಹಾಗೂ ಮಶೀನು ಪೊಲೀಸರ ವಶಕ್ಕೆ ಹೇಗೆ ಬಂತೆಂಬುವುದನ್ನು ಎದುರುದಾರರ ಪಕ್ಷದವರು ವಿವರಿಸಿಲ್ಲ. ಅದೇ ರೀತಿ ಪಿ.ಡಬ್ಲ್ಯೂ-2 ನೇಯವರು ತಾನು ತನಿಖೆ ನಡೆಸಿದ ಬಗ್ಗೆ ಹಾಗೂ ದೋಷಾರೋಪಣಾ ಪಟ್ಟಿ ಸಲ್ಲಿಸಿದ ಬಗ್ಗೆ ನುಡಿದಿದ್ದು ಮೂಲ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಸಂಬಂಧಪಟ್ಟ ಕ್ರಿಮಿನಲ್ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯೊಂದಿಗೆ ಸಲ್ಲಿಸುವುದರಿಂದ ಏಕಕಾಲದಲ್ಲಿ ಒಂದು ಮೂಲ ದಾಖಲೆಯನ್ನು ಎರಡು ಸ್ಥಳಗಳಲ್ಲಿ ನೀಡಲು ಸಾಧ್ಯವಿಲ್ಲವೆಂಬುದನ್ನು ಮನಗಂಡು ಅವರು ಸಲ್ಲಿಸಿದಂತಹ ದೃಢೀಕೃತ ನಕಲನ್ನು ಅನಿವಾರ್ಯವಾಗಿ ಪ್ರಾಧಿಕಾರವು ಒಪ್ಪಿಕೊಳ್ಳಬೇಕಾಗುತ್ತದೆ. ಒಂದು ವೇಳೆ ಅದರಲ್ಲಿ ಯಾವುದಾದರೂ ದಾಖಲೆಯನ್ನು ತಿದ್ದಿದ್ದಾದಲ್ಲಿ ಅಂತಹ ದಾಖಲೆಯ ಮೂಲ ಪ್ರತಿಯ ದೃಢೀಕೃತ ನಕಲನ್ನು ಕ್ರಿಮಿನಲ್ ನ್ಯಾಯಾಲಯದಿಂದ ಪಡೆದು ಈ ಪ್ರಾಧಿಕಾರಕ್ಕೆ ಎದುರುದಾರರ ಪಕ್ಷದವರು ಸಲ್ಲಿಸಬಹುದಾಗಿತ್ತು. ದೋಷಾರೋಪಣಾ ಪಟ್ಟಿಯು ಸಂಬಂಧಪಟ್ಟ ಸಹಾಯಕ ಸರ್ಕಾರಿ ಅಭಿಯೋಜಕರಿಂದ ಪುನರ್ಪರಿಶೀಲನೆಗೊಳಪಟ್ಟು ಘನ ನ್ಯಾಯಾಲಯಕ್ಕೆ ಸಲ್ಲಿಸಲ್ಪಡುವುದರಿಂದ ಪರಿಶೀಲನೆ ಮಾಡದೇ ಸಲ್ಲಿಸಲ್ಪಟ್ಟಿದೆ ಎನ್ನುವುದನ್ನು ಪರಿಗಣನೆಗೆ ತೆಗೆದುಕೊಳ್ಳಲು ಬರಲಾರದು. ಈ ಎಲ್ಲ ಕಾರಣಗಳಿಂದ ಅಭಿಯೋಜನೆ ಪಕ್ಷದವರು ಘಟನೆ ಸಂಭವಿಸಿರುವುದನ್ನು ನಿಸ್ಸಂಶಯವಾಗಿ ನಿರೂಪಿಸಿರುವುದು ಕಂಡುಬರುವುದರಿಂದ ಮೊದಲನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

15. ಅರ್ಜಿದಾರರಾದ ರತನ ವೆಂಕಟೇಶ ಹರಿಕಂತ್ರ ಇವರು ದಿನಾಂಕ:4.8.2004 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಪರ ವಕೀಲರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ಈ ಪ್ರಕರಣದಲ್ಲಿ ಜಪ್ತಿ ಮಾಡಿದ ನಾಡದೋಣಿಯು ತನ್ನದೇ ಆಗಿರುತ್ತದೆಂದೂ ಅದಕ್ಕೆ ಯಮಹಾ ಮಶೀನ್‌ನ್ನು ಕೂಡ್ರಿಸಲಾಗಿದೆಯೆಂದೂ ನಾಡದೋಣಿಯನ್ನು ಮೀನುಗಾರಿಕೆಗೆ ಉಪಯೋಗಿಸುತ್ತೇವೆಂದೂ, ಕುರ್ಮಗಡದ ಹತ್ತಿರ ತಾವುಗಳು ಇದ್ದಾಗ ಕಡಲುಪಡೆ ಪೊಲೀಸರು ತಮ್ಮನ್ನು ಜಬರದಸ್ತಿಯಿಂದ ಎಳೆದುಕೊಂಡು ತಂದು ದಸ್ತಗಿರಿ ಮಾಡಿದರೆಂದೂ, ಹಾಗೂ ನಾಡದೋಣಿಯನ್ನು ಕಡಲುಪಡೆ ಕಛೇರಿಗೆ ತಂದರೆಂದೂ, ನಾಡದೋಣಿಯಲ್ಲಿ ಸರಾಯಿ ಇತ್ತೆಂದೂ ಹೇಳುವುದು ಸುಳ್ಳೆಂದೂ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ ಕಾರವಾರದಲ್ಲಿ ಈ ಪ್ರಕರಣವು ನಿರ್ದೋಷಿಯೆಂದು ತೀರ್ಪಾಗಿರುತ್ತೆಂದೂ, ಕಡಲುಪಡೆ ಪೊಲೀಸರನ್ನು ನೋಡಿ ಸರಾಯಿ ಪೊಟ್ಲೆಗಳನ್ನು ಸಮುದ್ರದಲ್ಲಿ ಎಸೆದೆವು ಎನ್ನುವುದು ಸರಿಯಲ್ಲವೆಂದೂ ಈ ಖಟ್ಲೆಗೆ ಮತ್ತು ತನ್ನ ನಾಡದೋಣಿಗೆ ಯಾವುದೇ ಸಂಬಂಧವಿಲ್ಲವೆಂದು ಕಾರಣ ದೋಣಿ ಮತ್ತು ಮಶೀನನ್ನು ಬಿಟ್ಟುಕೊಡಬೇಕೆಂದು ವಿನಂತಿಸಿರುತ್ತಾರೆ. ನಂತರ ಮಾನ್ಯ ಎ.ಡಿ.ಪಿ. ಯವರ ಪಾಟೀ ಸವಾಲಿನಲ್ಲಿ ತನ್ನ ಬೋಟನ್ನು ಜಪ್ತಿ ಮಾಡಿ 8 ರಿಂದ 9 ವರ್ಷಗಳಾಗಿದ್ದು ತನ್ನ ಬೋಟನ್ನು ಫಿರ್ಯಾದಿಯವರು ಜಪ್ತಿ ಮಾಡುವ ಸಮಯದಲ್ಲಿ ಅವರ ಪರಿಚಯವು ತನಗೆ ಇರಲಿಲ್ಲವೆಂದು ಹಾಗೂ ಅದಕ್ಕಿಂತ ಪೂರ್ವದಲ್ಲಿ ತನ್ನೊಂದಿಗೆ ಯಾವುದೇ ವೈರತ್ವ ಇರಲಿಲ್ಲವೆಂದು ಕರ್ನಾಟಕಕ್ಕಿಂತ ಗೋವಾದಲ್ಲಿ ಅಬಕಾರಿ ವಸ್ತುಗಳ ಬೆಲೆ ಕಡಿಮೆ ಇದೆ ಎಂದು ಹೇಳುವುದು ಸುಳ್ಳೆಂದು ಗೋವಾದಿಂದ ಕರ್ನಾಟಕ ರಾಜ್ಯಕ್ಕೆ ಅಕ್ರಮವಾಗಿ ಸರಾಯಿ ಸಾಗಾಟವಾಗುವ ಪ್ರಕರಣಗಳು ಸಾಮಾನ್ಯವಾಗಿ ದಾಖಲಾಗುತ್ತಾ ಇರುತ್ತವೆ ಎನ್ನುವುದು ಸರಿಯಲ್ಲವೆಂದೂ ಕಡಲುಪಡೆ ಪೊಲೀಸರು ಜಬರದಸ್ತಿನಿಂದ ತನ್ನ ಮೇಲೆ ಪ್ರಕರಣ ದಾಖಲಿಸಿದ ಬಗ್ಗೆ ಅವರ ಮೇಲಾಧಿಕಾರಿಗಳಾದ ಎಸ್.ಪಿ. ಯವರಿಗೆ ದೂರು ವಗೈರೆ ನೀಡಿರಲಿಲ್ಲವೆಂದು ದೂರು ನೀಡಲು ತೊಂದರೆ ಇರಲಿಲ್ಲವೆಂದು ಚಿತ್ತಾಕುಲಾ ಪೊಲೀಸ್ ಠಾಣೆಯಲ್ಲಿ ಈ ಪ್ರಕರಣದಲ್ಲಿ ತಾನು ಆರೋಪಿಯಾಗಿರುತ್ತೇನೆಂದೂ, ಚಿತ್ತಾಕುಲಾ ಪೊಲೀಸರು ತನಿಖೆ ನಡೆಯಿಸಿ ತನ್ನ ಮೇಲೆ ಸಾಕ್ಷ್ಯಾಧಾರವನ್ನು ಸಂಗ್ರಹಿಸಿ ಆರೋಪಣಾ ಪಟ್ಟಿಯನ್ನು ಸಲ್ಲಿಸಿರುವುದು ನಿಜವಿರುತ್ತದೆಯೆಂದೂ, ಈ ಪ್ರಕರಣಕ್ಕೆ ಸಂಬಂಧಿಸಿದಂತೆ ತಾನು ಒಂದು ದಿನ ನ್ಯಾಯಾಲಯದ ಬಂಧನದಲ್ಲಿ ಇದ್ದೆನೆಂದೂ, ನುಡಿದಿರುತ್ತಾರೆ.

**16. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-**

ಡಿ.ಡಬ್ಲ್ಯೂ-1 ನೇಯವರು ತನ್ನ ದೋಣಿಯಲ್ಲಿ ಅಕ್ರಮ ಮದ್ಯದ ವಸ್ತುಗಳು ದೊರೆತಿಲ್ಲವೆಂಬುದನ್ನು ಬಿಟ್ಟು ಉಳಿದಂತೆ ನಾಡದೋಣಿಯು ತನ್ನದೆಂಬುವುದರ ಬಗ್ಗೆಯಾಗಲಿ ಕುರ್ಮಗಡದ ಹತ್ತಿರದಿಂದ ತಮ್ಮ ದೋಣಿಯನ್ನು ಕಡಲುಪಡೆ ಕಚೇರಿಗೆ ತಂದ ಬಗ್ಗೆಯಾಗಲಿ ಮುಖ್ಯ ವಿಚಾರಣೆಯಲ್ಲಿ ನಿರಾಕರಿಸಿರುವುದಿಲ್ಲ. ಹೀಗಾಗಿ ಘಟನೆ ಸಂಭವಿಸಿರುವುದನ್ನು ಈ ಪ್ರಕರಣದ ಎರಡನೇ ಆರೋಪಿಯಾದಂತಹ ಅರ್ಜಿದಾರರು ಒಪ್ಪಿಕೊಂಡಂತಾಗಿದೆ. ಅಲ್ಲದೇ ಪಾಟೀ ಸವಾಲಿನಲ್ಲಿ ಫಿರ್ಯಾದಿಯ ಪರಿಚಯ ತನಗೆ ಇರದ ಬಗ್ಗೆ ಹಾಗೂ ಪ್ರಕರಣ ದಾಖಲಾಗುವ ಪೂರ್ವದಲ್ಲಿ ತನ್ನೊಂದಿಗೆ ಫಿರ್ಯಾದಿಯು ಯಾವುದೇ ವೈರತ್ವ ಹೊಂದದ ಬಗ್ಗೆ ತಿಳಿಸಿರುವುದರಿಂದ ಫಿರ್ಯಾದಿ ಕಡೆಯವರು ಬೇಕಂತಲೇ ಇದೇ ಅರ್ಜಿದಾರರ ಮೇಲೆ ಏಕೆ ಪ್ರಕರಣ ದಾಖಲಿಸಿದರು ಎನ್ನುವ ಬಗ್ಗೆ ಡಿ.ಡಬ್ಲ್ಯೂ-1 ನೇಯವರು ವಿವರಿಸಿರುವುದಿಲ್ಲ. ಅಬಕಾರಿ ವಸ್ತುಗಳ ಬೆಲೆಯು ಕರ್ನಾಟಕ ರಾಜ್ಯದಲ್ಲಿ ಗೋವಾ ರಾಜ್ಯಕ್ಕಿಂತ ಹೆಚ್ಚಿಗೆ ಇರುವುದು ಪ್ರಸ್ತುತವಾಗಿದೆ. ಹೀಗಾಗಿ ಅನೈತಿಕ ಲಾಭವನ್ನು ಬಯಸುವುದಕ್ಕಾಗಿ ಅರ್ಜಿದಾರನಾದ ಆರೋಪಿಯು ತನ್ನ ಸಹಚರರೊಂದಿಗೆ ಅಕ್ರಮವಾಗಿ ಗೋವಾ ರಾಜ್ಯದ ಮದ್ಯದ ಸೀಸೆಗಳನ್ನು ಕರ್ನಾಟಕ ರಾಜ್ಯದತ್ತ ಸಾಗಿಸಿರುವುದು ಸ್ಪಷ್ಟವಾಗಿ ಸಾಬೀತಾಗುತ್ತದೆ. ಹಾಗೂ ಈ ರೀತಿಯ ಅನೇಕ ಪ್ರಕರಣಗಳು ಪ್ರತಿ ತಿಂಗಳು ಕರಾವಳಿ ತಾಲ್ಲೂಕುಗಳಾದ್ಯಂತ ದಾಖಲಾಗುತ್ತಲೇ ಇರುತ್ತವೆ. ಒಂದು ವೇಳೆ ಒತ್ತಾಯದಿಂದ ದೋಣಿಯನ್ನು ಫಿರ್ಯಾದಿ ಕಡೆಯವರು ಎಳೆದುಕೊಂಡು ಬಂದಲ್ಲಿ, ಪಾಟೀ ಸವಾಲಿನಲ್ಲಿ ನುಡಿದಂತೆ ಅವರ ಮೇಲಾಧಿಕಾರಿಗಳಿಗೆ ದೂರು ನೀಡಲು ತೊಂದರೆಯಿಲ್ಲದಿದ್ದರೂ ಸಹ ಏಕೆ ದೂರನ್ನು ನೀಡಿಲ್ಲವೆಂಬುವುದರ ಬಗ್ಗೆ ವಿವರಿಸಿಲ್ಲ ಈ ಪ್ರಕರಣದಲ್ಲಿ ತಾನು ಆರೋಪಿಯಾಗಿದ್ದು ತನ್ನನ್ನು ಒಂದು ದಿವಸ ನ್ಯಾಯಾಂಗ ಬಂಧನದಲ್ಲಿ ಇರಿಸಿದ್ದು ಹಾಗೂ ತನ್ನ ಮೇಲೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿದ್ದನ್ನು ಅರ್ಜಿದಾರರು ಒಪ್ಪಿಕೊಂಡಿರುತ್ತಾರೆ. ಒಂದು ವೇಳೆ ಸದ್ರಿ ದೋಣಿಯಲ್ಲಿ ಅಕ್ರಮ ಮದ್ಯ ಸಾಗಿಸದಿದ್ದಲ್ಲಿ ಈ ಪ್ರಕರಣದಲ್ಲಿ ಜಪ್ತಿಯಾದಂತಹ 375 ಮಿ.ಲೀನ. 36 ರುಬಿಸ್ ಕೋಕೋನಟ್ ಫೆನ್ನಿಯ ಸೀಸೆಗಳನ್ನು ಫಿರ್ಯಾದಿ ಕಡೆಯವರು ಎಲ್ಲಿಂದ ತಂದರು? ಎಂಬುವುದರ ಬಗ್ಗೆ ವಿವರಿಸಿಲ್ಲ ಅಲ್ಲದೇ ಪ್ರಾಧಿಕಾರದಿಂದ ನೀಡಲಾದ ಕಾರಣಕೇಳಿ ನೋಟೀಸಿಗೆ ಸಮಜಾಯಿಷಿಯನ್ನು ಸಲ್ಲಿಸದಿರುವುದರಿಂದ ಬೋಟಿನ ಮೇಲೆ ಹೊರಿಸಿರುವ ಆರೋಪವನ್ನು ಅರ್ಜಿದಾರರು ನೇರವಾಗಿ ಒಪ್ಪಿಕೊಂಡಂತಾಗಿದೆ. ಆದುದರಿಂದ ಎರಡನೇಯ ವಿವಾದಾಂಶವನ್ನು ನಕಾರಾತ್ಮಕವಾಗಿ ಉತ್ತರಿಸಲಾಗಿದೆ.

ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತಿ ಮಾಡಲ್ಪಟ್ಟ ವಾಹನದಲ್ಲಿ ಅಕ್ರಮವಾಗಿ ಗೋವಾ ರಾಜ್ಯದ ಫೆನ್ನಿಯನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ. 62/2001 ದಿನಾಂಕ: 15.7.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ:183/2001 ದಿನಾಂಕ:21.7.2004 ರಂತೆ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಸದರಿ ದೋಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ,

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 ಎ(1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಚಿತ್ತಾಕುಲಾ ಪೊಲೀಸ್ ಠಾಣೆಯ ಗುನ್ಹೆ ಸಂಖ್ಯೆ. 67/96 ದಿನಾಂಕ: 18.5.1996 ರಲ್ಲಿ ಜಪ್ತಿಯಾದಂತಹ ಒಂದು ನಾಡದೋಣಿಯ ಉದ್ದ 28 ಫೂಟ್, ಅಗಲ 2 ಫೂಟ್, 5 ಇಂಚು ಮತ್ತು ಎತ್ತರ 3 ಫೂಟ್ ಹಾಗೂ ಅದಕ್ಕೆ ಜೋಡಿಸಿದ್ದ ಯಮಹಾ ಮಶೀನ್ ಸಂಖ್ಯೆ:ಇ-25 ಎಫ್.ಕೆ.6, ಎ.4.ಎಲ್.314219 "ಮೇಡ್ ಇನ್ ಜಪಾನ್" ನೇದನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಪ್ರಾಧಿಕಾರದ ಆದೇಶ ಸಂಖ್ಯೆ:ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/588/1995-96 ದಿನಾಂಕ:30.5.1996 ನೇದರಂತೆ ಈ ಪ್ರಕರಣದಲ್ಲಿ ದೋಣಿ ಹಾಗೂ ಮಶೀನಿನ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿರುವ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಆದೇಶವನ್ನು ಇಂದು ಅಂದರೆ 2004ನೇ ಇಸ್ವಿಯ ಅಕ್ಟೋಬರ್ ತಿಂಗಳ 20ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ಗಣಕೀಕೃತಗೊಳಿಸಿ ತಿದ್ದಿದ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು).

**ಕೆ.ಸಿ. ಹರಿದಾಸ್**

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.ನಂ. 1: ಎಸ್.ಎಂ. ನಾಯ್ಕ ಎ.ಎಸ್.ಐ

ಪ್ರಾ.ಸಾ.ನಂ. 2: ಆರ್. ಮಂಜುನಾಥ, ಪಿ.ಎಸ್.ಐ

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

ಡಿ.ಡಬ್ಲ್ಯ್ಯು. 1: ರತನ ವೆಂಕಟೇಶ ಹರಿಕಂತ್ರ

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಪಿ 1 : ಪಂಚನಾಮೆ

ನಿಶಾನೆ ಪಿ 1 ಎ : ಫಿರ್ಯಾದಿಯ ಸಹಿ

ನಿಶಾನೆ ಪಿ 2 : ರಾಸಾಯನಿಕ ವಿಶ್ಲೇಷಣಾ ವರದಿ

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

ಇಲ್ಲಾ

**ಕೆ.ಸಿ. ಹರಿದಾಸ್**

ಪಿ.ಆರ್. 1535 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ:304:ಡಿಟಿಸಿಆರ್:2002-2003 ದಿನಾಂಕ: 28ನೇ ಅಕ್ಟೋಬರ್ 2004**

**ಉಪಸ್ಥಿತರು :** ಗೋವಿಂದಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ದ.ಕ.ಜಿಲ್ಲೆ, ಮಂಗಳೂರು.

**ಪಿರ್ಯಾಧಿದಾರರು:**
ಅಬಕಾರಿ ನಿರೀಕ್ಷಕರು,
ಮಂಗಳೂರು ಉಪ ವಿಭಾಗ, ಮಂಗಳೂರು.

**ವಿರುದ್ಧ**

**ಆರೋಪಿಗಳು:**
1) ಜೊಸ್ಸಿ ಮೊಂತೆರೊ (ಪ್ರಾಯ 38 ವರ್ಷ) ಬಿನ್: ಸಿಪ್ರಿಯನ್ ಮೊಂತೆರೊ, ಹೊಸಪಡ್ಪು, ಅಡಂಕುದ್ರು ಮನೆ, ಪೆರ್ಮನ್ನೂರು ಅಂಚೆ/ಗ್ರಾಮ, ಮಂಗಳೂರು.
2) ಅರುಣ್ ವೇಗಸ್ (ಪ್ರಾಯ 24 ವರ್ಷ) ಕೇರ್ ಆಫ್: ಸೆಬೆಸ್ಟಿಯನ್ ವೇಗಸ್, ಕೊಲ್ಯ ಮನೆ, ಕುಲಾಲ್ ಮಂದಿರ ಹತ್ತಿರ ಕೋಟೆಕಾರ್ ಅಂಚೆ, ಮಂಗಳೂರು.

**ಅರ್ಜಿದಾರರು:**
ಅರುಣ್ ವೇಗಸ್ (ಪ್ರಾಯ 24 ವರ್ಷ) ಕೇರ್ ಆಫ್: ಸೆಬೆಸ್ಟಿಯನ್ ವೇಗಸ್, ಕೊಲ್ಯ ಮನೆ, ಕುಲಾಲ್ ಮಂದಿರ ಹತ್ತಿರ ಕೋಟೆಕಾರ್ ಅಂಚೆ, ಮಂಗಳೂರು - 574 152

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 13-11-2002ರಂದು ಬೆಳಿಗ್ಗೆ 5-30ರ ಸಮಯದಲ್ಲಿ ಮಂಗಳೂರು ಉಪ ವಿಭಾಗದ ಅಬಕಾರಿ ನಿರೀಕ್ಷಕರು ತಮ್ಮ ಸಿಬ್ಬಂದಿಯವರೊಂದಿಗೆ ಮಂಗಳೂರು ನಗರದ ಕೆ.ಎಸ್.ಆರ್.ಟಿ.ಸಿ. ಬಸ್ಸು ನಿಲ್ದಾಣದ ಬಳಿ ಗಸ್ತು ಕಾರ್ಯನಿರ್ವಹಿಸುತ್ತಿರುವ ಸಮಯದಲ್ಲಿ ಒಂದು ಬಜಾಜ್ ಆಟೋರಿಕ್ಷಾ ಕೆ.ಎಸ್.ಆರ್.ಟಿ.ಸಿ. ಮುಂಭಾಗದ ರಸ್ತೆಯಿಂದ ಬಿಜೈ ಕಡೆಗೆ ಬರುತ್ತಿದ್ದು, ಅದೇ ರಸ್ತೆಯಲ್ಲಿ ಜಾಲಿ ವೈನ್ಸ್ ಹತ್ತಿರ ನಿಂತಿದ್ದ ಇಲಾಖೆ ಸಿಬ್ಬಂದಿಯನ್ನು ಕಂಡು ಹಿಂದಕ್ಕೆ ಹೋಗಲು ಪ್ರಯತ್ನಿಸಿದಾಗ ಅಬಕಾರಿ ನಿರೀಕ್ಷಕರು ಸದ್ರಿ ಆಟೋರಿಕ್ಷಾ ಸಂಖ್ಯೆ: ಕೆಎ-19ಎ-3392 ನ್ನು ತಡೆದು ನಿಲ್ಲಿಸಿ ಪಂಚಾಯತುದಾರರ ಸಮಕ್ಷಮ ಪರಿಶೀಲನೆ ನಡೆಸಲು, ಆಟೋದಲ್ಲಿ ಚಾಲಕ ಮತ್ತು ಆತನ ಬದಿಯಲ್ಲಿ ಒಬ್ಬ ಆಸಾಮಿಯಿದ್ದು, ಚಾಲಕನ ಹಿಂಬದಿಯಲ್ಲಿ 4 ಕಪ್ಪು ಬಣ್ಣದ ರಬ್ಬರು ಟ್ಯೂಬ್‌ಗಳಲ್ಲಿ ತಲಾ 60 ಲೀಟರ್‌ನಂತೆ 240 ಲೀಟರ್ ಕಳ್ಳಭಟ್ಟಿ ಸಾರಾಯಿ ಇರುವುದು ಕಂಡು ಬಂತು. ಈ ಬಗ್ಗೆ ವಿಚಾರ ಮಾಡಲಾಗಿ ಸದ್ರಿ ಕಳ್ಳಭಟ್ಟಿ ಸಾರಾಯಿಯನ್ನು ಕೂಳೂರಿನಿಂದ ಉಳ್ಳಾಲಕ್ಕೆ ತೆಗೆದುಕೊಂಡು ಹೋಗುತ್ತಿರುವುದಾಗಿ, ಈ ಬಗ್ಗೆ ಯಾವುದೇ ರಹದಾರಿ ಇಲ್ಲವೆಂದು ಕಳ್ಳಭಟ್ಟಿ ಸಾರಾಯಿಯನ್ನು ಮಾರಾಟಕ್ಕೆ ಕೊಂಡು ಹೋಗುತ್ತಿರುವುದಾಗಿ ತಿಳಿಸಿರುತ್ತಾರೆ. ಈ ರೀತಿ ಕಳ್ಳಭಟ್ಟಿ ಸಾರಾಯಿ ಹೊಂದಿ ಸಾಗಾಟ ಮಾಡುವುದು ಅಬಕಾರಿ ಕಾಯ್ದೆಯ ಅಡಿಯಲ್ಲಿ ಅಕ್ರಮವೆಂದು ತಿಳಿಸಿ ದೊರೆತ ಕಳ್ಳಭಟ್ಟಿ ಸಾರಾಯಿಯನ್ನು ಹಾಗೂ ಅಕ್ರಮ ಸಾಗಣೆಗೆ ಉಪಯೋಗಿಸಿದ ಆಟೋರಿಕ್ಷಾವನ್ನು ನೋಂದಣಿ ಸಂಖ್ಯೆ: ಕೆಎ-19ಎ-3392 ಚಾಸಿಸ್ ಸಂಖ್ಯೆ: 24ಎಫ್ ಬಿಎಫ್‌ಹೆಚ್-77875, ಇಂಜಿನ್ ಸಂಖ್ಯೆ: ಎಇಎಂ ಬಿಎಫ್‌ಹೆಚ್-62373 ನ್ನು ಪಂಚರ ಸಮಕ್ಷಮ ಇಲಾಖೆಯ ವಶಕ್ಕೆ ತೆಗೆದುಕೊಂಡು ಪ್ರತಿಯೊಂದು ರಬ್ಬರ್ ಟ್ಯೂಬಿನಿಂದ ತಲಾ 750 ಮಿಲಿಯಂತೆ ರಾಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕಿಸಿ ಬಾಟ್ಲಿಗಳ ಬಾಯಿಯನ್ನು ಬಟ್ಟೆದಾರದಿಂದ ಕಟ್ಟಿ ಇಲಾಖೆಯ ಸೀಲ್‌ನಿಂದ ಸೀಲ್ ಮಾಡಲಾಯಿತು. ಮಾದರಿ ಸೀಲನ್ನು ತಯಾರಿಸಿ ಸ್ಥಳದಲ್ಲಿಯೇ ಮಹಜರನ್ನು ತಯಾರಿಸಲಾಯಿತು. ಆರೋಪಿಗಳ ಹೆಸರು ಮತ್ತು ವಿಳಾಸವನ್ನು ಕೇಳಲಾಗಿ ಚಾಲಕನು ತನ್ನ ಹೆಸರು ಅರುಣ್ ವೇಗಸ್, ಬಿನ್: ಸೆಬೆಸ್ಟಿಯನ್ ವೇಗಸ್ (ಪ್ರಾಯ 24 ವರ್ಷ), ಕೊಲ್ಯ ಮನೆ, ಕೋಟೆಕಾರ್ ಅಂಚೆ ಎಂದು, ಜೋಸ್ಸಿ ವೇಗಸ್ ರವರ ಕೋರಿಕೆಯಂತೆ ಬಾಡಿಗೆಗೆ ಕಳ್ಳಭಟ್ಟಿ ಸಾರಾಯಿ ಎಂದು ಗೊತ್ತಿಲ್ಲದೆ ಕೊಂಡುಹೋಗುತ್ತಿರುವುದಾಗಿ ತಿಳಿಸಿರುತ್ತಾನೆ. ಚಾಲಕನೊಂದಿಗೆ ಪ್ರಯಾಣಿಸುತ್ತಿದ್ದ ವ್ಯಕ್ತಿ ತಾನು ಹೊಸಪಡ್ಡು, ಆಡಂಕುದ್ರು ಪೆರ್ಮನ್ನೂರು ಗ್ರಾಮದ ನಿವಾಸಿಯಾದ ಸಿಪ್ರಿಯನ್ ವೇಗಸ್ ಇವರ ಮಗ ಜೋಸ್ಸಿ ವೇಗಸ್ ಎಂದು ಪ್ರಾಯ

38 ವರ್ಷಗಳೆಂದು ತಿಳಿಸಿರುತ್ತಾನೆ. ಈ ರೀತಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಣೆ ಮಾಡುವುದು ಅಬಕಾರಿ ಕಾನೂನಿಗೆ ವಿರುದ್ಧವೆಂದು ಕಳ್ಳಭಟ್ಟಿ ಸಾರಾಯಿಯನ್ನು ಹಾಗೂ ಆಟೋರಿಕ್ಷಾವನ್ನು ಜಪ್ತಿಗೊಳಿಸಿ ಆರೋಪಿಗಳನ್ನು ದಸ್ತಗಿರಿ ಮಾಡಿ, ಕಛೇರಿಗೆ ಹಿಂತಿರುಗಿ ಆರೋಪಿತರ ವಿರುದ್ಧ ಮೊಕದ್ದಮೆ ಸಂಖ್ಯೆ: 30/2002-03 ದಿ:13.11.2002ರ ಮೂಲಕ ಮೊಕದ್ದಮೆ ದಾಖಲು ಮಾಡಿ, ದಾಖಲೆಗಳನ್ನು ನ್ಯಾಯಾಲಯಕ್ಕೂ ಹಾಗೂ ಪ್ರಾಧಿಕಾರಕ್ಕೂ ಸಲ್ಲಿಸಿರುತ್ತಾರೆ. ಪ್ರಕರಣವನ್ನು ಮುಂದಿನ ತನಿಖೆಯ ಬಗ್ಗೆ ಅಬಕಾರಿ ನಿರೀಕ್ಷಕರು, ಹಂಪನಕಟ್ಟ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ದಿನಾಂಕ: 20.11.2002 ರಂದು ಈ ಪ್ರಕರಣದ ಆರೋಪಿ ಹಾಗೂ ಜಪ್ತಿಪಡಿಸಲಾದ ವಾಹನದ ಮಾಲೀಕರಾದ ಅರುಣ್ ವೇಗಸ್ ಇವರು ತನ್ನ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ ವಾಹನವನ್ನು ತಾತ್ಕಾಲಿಕವಾಗಿ ಮಧ್ಯಂತರ ಅವಧಿಗೆ ಬಿಡುಗಡೆಗೊಳಿಸುವಂತೆ ಕೋರಿರುತ್ತಾರೆ. ದಿನಾಂಕ: 13.11.2002 ರಂದು ಮಂಗಳೂರಿನ ಕೆ.ಎಸ್.ಆರ್.ಟಿ.ಸಿ. ಬಸ್ಸು ನಿಲ್ದಾಣದಲ್ಲಿ ಜೋಸ್ಸಿ ಮೊಂತೆರೊ ಎಂಬುವರು ತನ್ನನ್ನು ಕದ್ರಿ ಹಿಲ್ಸ್‌ನಲ್ಲಿರುವ ತನ್ನ ಮನೆಗೆ ಬಿಡುವಂತೆ ಕೋರಿದ್ದು, ಅವರು ಬೆಂಗಳೂರಿನಿಂದ ಬಂದಿರುತ್ತಾರೆ ಎಂದು ತಿಳಿಸಿದ್ದು ಆತನಲ್ಲಿ ಸಾಮಾನನ್ನು ಪರಿಶೀಲಿಸದೆ ಆತನನ್ನು ಆಟೋದಲ್ಲಿ ಕುಳ್ಳಿರಿಸಿಕೊಂಡು ಬರುತ್ತಿರುವಾಗ ಅಬಕಾರಿ ಅಧಿಕಾರಿಗಳು ಆಟೋವನ್ನು ಶೋಧನೆ ಮಾಡಿ ಜಪ್ತಿಗೊಳಿಸಿರುತ್ತಾರೆಂದು, ಪ್ರಯಾಣಿಕರು ಕಳ್ಳಭಟ್ಟಿ ಸಾರಾಯಿಯನ್ನು ಹೊಂದಿ ತನ್ನ ರಿಕ್ಷಾದಲ್ಲಿ ಪ್ರಯಾಣ ಮಾಡುತ್ತಿರುವುದು ತನಗೆ ಗೊತ್ತಿಲ್ಲವೆಂದು ತಿಳಿಸುತ್ತಾ ವಾಹನವನ್ನು ಮಧ್ಯಂತರ ಬಿಡುಗಡೆಗೊಳಿಸಲು ಕೋರಿರುತ್ತಾರೆ. ಅರ್ಜಿದಾರರ ಕೋರಿಕೆಯನ್ನು ಮನ್ನಿಸಿ ಪ್ರಾಧಿಕಾರವು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನಿರ್ಧರಿಸಿದ ಮೌಲ್ಯವಾದ ರೂ.20,000/- ಗಳ ಬ್ಯಾಂಕ್ ಗ್ಯಾರಂಟಿ ನೀಡುವ ಹಾಗೂ ಇನ್ನಿತರ ಷರತ್ತುಗಳ ಮೇರೆಗೆ ಆಟೋರಿಕ್ಷಾ ಸಂಖ್ಯೆ: ಕೆಎ-19ಎ-3392 ನ್ನು ಮಧ್ಯಂತರ ಬಿಡುಗಡೆಗೆ ದಿನಾಂಕ: 25.11.2002 ರಂದು ಆದೇಶ ನೀಡಿರುತ್ತದೆ. ಅಂತೆಯೇ ಅರ್ಜಿದಾರರು ಬ್ಯಾಂಕ್ ಗ್ಯಾರಂಟಿಯನ್ನು ಪ್ರಾಧಿಕಾರಕ್ಕೆ ನೀಡಿದ್ದು, ಜಪ್ತಿಗೊಳಿಸಿದ್ದ ವಾಹನವನ್ನು ಅರ್ಜಿದಾರರ ವಶಕ್ಕೆ ಬಿಡುಗಡೆ ಮಾಡಲು ದಿನಾಂಕ: 26.11.2002 ರಂದು ಆದೇಶ ನೀಡಿರುತ್ತದೆ.

ಈ ಪ್ರಕರಣದ ಆರೋಪಿ ಹಾಗೂ ವಾಹನ ಚಾಲಕರಾದ ಅರುಣ್ ವೇಗಸ್ ಇವರಿಗೆ ಪ್ರಾಧಿಕಾರವು ದಿನಾಂಕ:26.11.2002 ರಂದು ಕಾರಣ ಕೇಳಿ ನೋಟೀಸನ್ನು ನೀಡಿದ್ದು, ಅರ್ಜಿದಾರರು ಪ್ರಾಧಿಕಾರವು ನೀಡಲಾಗಿದ್ದ ಕಾರಣ ಕೇಳಿ ನೋಟೀಸಿಗೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ ಸರ್ಕಾರದ ಅಭಿಯೋಜನೆ ಪರವಾಗಿ 3 ಸಾಕ್ಷಿಗಳ ಹೇಳಿಕೆಯನ್ನು, ಪ್ರತಿರಕ್ಷಾ ಪರ ಒಂದು ಸಾಕ್ಷಿಯನ್ನು ವಿಚಾರಣೆ ನಡೆಸಿ ವಾಹನ ಮಾಲೀಕರ ಹೇಳಿಕೆಯನ್ನು ಪಡೆಯಲಾಗಿದೆ.

ಈ ಪ್ರಕರಣದಲ್ಲಿ ಸರಕಾರದ ಪರ ಒದಗಿಸಲಾಗಿರುವ ಸಾಕ್ಷ್ಯಾಧಾರಗಳು ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಕೆಳಗಿನ ಅಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ: 13.11.2002 ರಂದು ವಾಹನ ಆಟೋರಿಕ್ಷಾ ಸಂಖ್ಯೆ: ಕೆಎ-19ಎ-3392 ರಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿಯನ್ನು ಸಾಗಣೆ ಮಾಡಲಾಗಿದೆಯೇ?

2) ವಶಪಡಿಸಿಕೊಂಡಿರುವ ವಾಹನದ ಮಾಲೀಕನು ತಾನೆಂದು ಮತ್ತು ತನಗೆ ತಿಳುವಳಿಕೆಯಿಲ್ಲದೆ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಣೆ ಮಾಡಲಾಗಿದೆ ಎಂದು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತಿಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಮೇಲೆ ತಿಳಿಸಿರುವ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ ಪರಿಗಣಿಸಿದೆ.

**ಪ್ರಾ.ಸಾ.2:**

ಶ್ರೀ ಜಾರ್ಜ್ ಪಿಂಟೊ, ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ ಇವರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು, ದಿ:21.8.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ದಿ.13.11.2002 ರಂದು ಮಂಗಳೂರು ನಗರದ ಕೆ.ಎಸ್.ಆರ್.ಟಿ.ಸಿ. ಬಸ್ಸು ನಿಲ್ದಾಣದ ಮುಂಭಾಗ ಗಸ್ತು ಇರುವಾಗ ಒಂದು ಆಟೋರಿಕ್ಷಾ ಕೆ.ಎಸ್.ಆರ್.ಟಿ.ಸಿ. ಬಿಜೈ ಮುಖವಾಗಿ ಬರುವುದು ಕಾಣಿಸಿತು. ಸಮವಸ್ತ್ರದಲ್ಲಿದ್ದ ಸಿಬ್ಬಂದಿಯನ್ನು ನೋಡಿ ಹಿಂದಕ್ಕೆ ತಿರುಗುವುದನ್ನು ಕಂಡು ನನ್ನ ಆದೇಶದ ಮೇರೆಗೆ ರಿಕ್ಷಾವನ್ನು ತಡೆದು ನಿಲ್ಲಿಸಲು, ಸದ್ರಿ ರಿಕ್ಷಾದ ಮುಂಭಾಗದ ಸೀಟಿನಲ್ಲಿ ಚಾಲಕ ಮತ್ತು ಇನ್ನೊಬ್ಬ ಆಸಾಮಿಯು ಕುಳಿತಿರುವುದು ಕಂಡು ಬಂದಿದ್ದು, ಚಾಲಕನ ಹಿಂಬದಿಯಲ್ಲಿ 4 ಕಪ್ಪು ಬಣ್ಣದ ರಬ್ಬರು ಟ್ಯೂಬುಗಳಲ್ಲಿ ಕಳ್ಳಭಟ್ಟಿ ಘಾಟು ವಾಸನೆವಿರುವುದು ಕಂಡು ಬಂತು. ಪಂಚರ ಸಮಕ್ಷಮ ರಿಕ್ಷಾವನ್ನು ಶೋಧನೆ ಮಾಡಿದಾಗ ಹಿಂಬದಿಯಲ್ಲಿದ್ದ 4 ರಬ್ಬರು ಟ್ಯೂಬ್‌ಗಳಲ್ಲಿ ತಲಾ 60 ಲೀಟರ್‌ನಂತೆ 240 ಲೀಟರ್ ಕಳ್ಳಭಟ್ಟಿ ಸಾರಾಯಿ ಇರುವುದು ಕಂಡು ಬಂತು. ಚಾಲಕನನ್ನು ವಿಚಾರಿಸಲಾಗಿ ತಾನು ಕೂಳೂರಿನಿಂದ ಉಳ್ಳಾಲಕ್ಕೆ ಬಾಡಿಗೆ ಆಧಾರದ ಮೇಲೆ ಸದ್ರಿ ಸರಕನ್ನು ಸಾಗಣೆ ಮಾಡುತ್ತಿರುವುದಾಗಿ ತಿಳಿಸಿದ. ನಂತರ ಚಾಲಕನೊಂದಿಗಿದ್ದ ಆಸಾಮಿಯನ್ನು ವಿಚಾರಿಸಲಾಗಿ, ಸದ್ರಿ ಸಾರಾಯಿಯನ್ನು ಉಳ್ಳಾಲಕ್ಕೆ ಮಾರಾಟಕ್ಕಾಗಿ ಕೊಂಡುಹೋಗುತ್ತಿರುವುದಾಗಿ ತಿಳಿಸಿದ. ಈ ರೀತಿ ಕಳ್ಳಭಟ್ಟಿ ಸಾರಾಯಿಯನ್ನು ಸಾಗಾಣೆ ಮಾಡುವುದು ಅಬಕಾರಿ ನಿಯಮದಂತೆ ಅಪರಾಧವೆಂದು ತಿಳಿಸಿ, 4 ಟ್ಯೂಬುಗಳಲ್ಲಿದ್ದ ಸಾರಾಯಿಯನ್ನು ಅಕ್ರಮ ಸಾಗಾಣೆಗೆ ಉಪಯೋಗಿಸಿದ ವಾಹನ ರಿಕ್ಷಾ ಸಂಖ್ಯೆ: ಕೆಎ-19ಎ-3392 ಚಾಸಿಸ್ ಸಂಖ್ಯೆ: 24ಎಫ್ ಬಿಎಫ್‌ಹೆಚ್-77875, ಇಂಜೀನ್ ಸಂಖ್ಯೆ: ಎ೩ಎಂ ಬಿಎಫ್‌ಹೆಚ್-66173 ನ್ನು ಸರಕಾರಕ್ಕೆ ವಶಪಡಿಸಿ, ರಬ್ಬರು, ಟ್ಯೂಬುಗಳಿಂದ ತಲಾ 750 ಮಿಲಿ ಸಾರಾಯಿಯನ್ನು ರಾಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕಿಸಿ ಬಾಟ್ಲಿಗಳ ಬಾಯಿಯನ್ನು ಬಟ್ಟೆದಾರಗಳಿಂದ ಕಟ್ಟಿ ಇಲಾಖೆಯ ಸೀಲ್‌ನಿಂದ ಸೀಲ್ ಮಾಡಲಾಯಿತು. ಮಾದರಿ ಸೀಲ್‌ಗಳನ್ನು ತಯಾರಿಸಲಾಯಿತು. ನಂತರ ಆಟೋ ಚಾಲಕನ ಹೆಸರು ವಿಳಾಸವನ್ನು ವಿಚಾರಿಸಲಾಗಿ ಚಾಲಕನು ತನ್ನ ಹೆಸರು ಅರುಣ್ ವೇಗಸ್, ಬಿನ್: ಸೆಬೆಸ್ಟಿಯನ್ ವೇಗಸ್ (ಪ್ರಾಯ 24 ವರ್ಷ), ಕೊಲ್ಯ ಮನೆ, ಕೋಟೆಕಾರ್ ಅಂಚೆ ಎಂದು, ಚಾಲಕನೊಂದಿಗಿದ್ದ ಆಸಾಮಿಯು ತನ್ನ ಹೆಸರು ಜೋಸ್ಸಿ ವೇಗಸ್, ಬಿನ್: ಸಿಪ್ರಿಯನ್ ವೇಗಸ್ (ಪ್ರಾಯ 29 ವರ್ಷ) ಹೊಸಪಡ್ಡು, ಅಡಂಕುದ್ರು ಪೆರ್ಮನ್ನೂರು ಗ್ರಾಮ ಎಂದು ತಿಳಿಸಿರುತ್ತಾನೆ. ಆರೋಪಿಗಳ ಹೆಸರು, ವಿಳಾಸವಿರುವ ಗುರುತಿನ ಚೀಟಿಗಳನ್ನು ಮುದ್ದೆ ಮಾಲು ಹಾಗೂ ಮಾದರಿ ಶೀಷೆಗಳ ಮೇಲೆ ಅಂಟಿಸಿ, ಬಳಿಕ ಆರೋಪಿಗಳನ್ನು ದಸ್ತಗಿರಿ ಮಾಡಿ ಕಛೇರಿಗೆ ಹಿಂತಿರುಗಲಾಯಿತು. ಮಹಜರನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು. ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ ದಾಖಲಾತಿಗಳ ಮೂಲ ಪ್ರತಿಗಳೊಂದಿಗೆ ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಅದರ ದಾಖಲಾತಿ ಪ್ರತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಲಾಯಿತು. ಪ್ರಾಧಿಕಾರದ ಆದೇಶದ ಮೇರೆಗೆ ಪ್ರಕರಣವನ್ನು ಸ್ವತ್ತುಗಳೊಂದಿಗೆ ಅಬಕಾರಿ ನಿರೀಕ್ಷಕರು, ಹಂಪನಕಟ್ಟ ವಲಯ ಇವರಿಗೆ ಹಸ್ತಾಂತರಿಸಲಾಯಿತು. ನಂತರ ರಿಕ್ಷಾ ಚಾಲಕನೊಂದಿಗಿದ್ದ ಆಸಾಮಿಯ ಹೆಸರು ಜೊಸ್ಸಿ ಮೊಂತೆರೊ ಎಂಬುವುದಾಗಿ ಕಂಡು ಬಂದ ಪ್ರಯುಕ್ತ ಮಾನ್ಯ ನ್ಯಾಯಾಲಯಕ್ಕೂ ಹಾಗೂ ಪ್ರಾಧಿಕಾರಕ್ಕೂ ತಿದ್ದುಪಡಿ

ಮೆಮೋ ಸಲ್ಲಿಸಲಾಯಿತು. ಈ ದಿನ ಮಹಜರಿನ ಪ್ರತಿ ನೋಡಿದೆನು. ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು. ಪ್ರಥಮ ಮಾಹಿತಿ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-2 ಎಂದು ಗುರುತಿಸಲಾಯಿತು. ಅಧಿಕೃತ ಅಧಿಕಾರಿಯವರಿಗೆ ಸಲ್ಲಿಸಲಾಗಿದ್ದ ವರದಿಯನ್ನು ನೋಡಿದೆನು. ಅದನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತು ಎಂದು ತನ್ನ ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಆ ದಿನ ನಾನು ಗಸ್ತು ಕರ್ತವ್ಯದಲ್ಲಿದ್ದಾಗ ಸಂಶಯದ ಮೇಲೆ ತಪಾಸಣೆ ಮಾಡಿದೆನು. ತಕ್ಷೀರು ಸ್ಥಳವು ನಮ್ಮ ಕಛೇರಿಯಿಂದ ಒಂದು ಕಿ.ಮೀ. ದೂರವಿದೆ, ಹಾಗೂ ಕೆ.ಎಸ್.ಆರ್.ಟಿ.ಸಿ. ಬಸ್ಸು ನಿಲ್ದಾಣದ ಮುಂಭಾಗದಲ್ಲಿದೆ. ನನ್ನ ತನಿಖೆಯ ಪ್ರಕಾರ ರಿಕ್ಷಾವು ಕೂಳೂರಿನಿಂದ ಉಳ್ಳಾಲಕ್ಕೆ ಹೋಗುವುದಾಗಿ ತಿಳಿಸಿರುತ್ತಾರೆ. ಕೂಳೂರಿನಿಂದ ಉಳ್ಳಾಲಕ್ಕೆ ಹೋಗಲು ನೇರವಾಗಿ ರಾಷ್ಟ್ರೀಯ ಹೆದ್ದಾರಿಯಾಗಿ ಹೋಗಲು ಸಾಧ್ಯವಿದೆ. ತಕ್ಷೀರು ಸ್ಥಳವು 4.00 ಗಂಟೆಯಿಂದ ಜನನಿಬಿಡ ಸ್ಥಳವಾಗಿರುತ್ತದೆ. ತಕ್ಷೀರು ಸ್ಥಳದ ಸುತ್ತಮುತ್ತಲು ಯಾವಾಗಲೂ ಪೊಲೀಸ್ ಪಹರೆಯಿದ್ದು, ಸದ್ರಿ ನಿಲ್ದಾಣದಲ್ಲಿ ಎಲ್ಲಾ ವಾಹನಗಳನ್ನು ಚೆಕ್ ಮಾಡುತ್ತಾರೆಂದು ನನಗೆ ಗೊತ್ತಿಲ್ಲ. ತಕ್ಷೀರು ದಿನದಂದು ಸಂಶಯಾಸ್ಪದ ಬಂದ ರಿಕ್ಷಾದ ಹೊರತು ಬೇರೆ ವಾಹನವನ್ನು ನಿಲ್ಲಿಸಲಿಲ್ಲ. ಸದ್ರಿ ರಿಕ್ಷಾವು ಕೆ.ಎಸ್.ಆರ್.ಟಿ.ಸಿ. ಯಿಂದ ಬಿಜೈ ಕಡೆಗೆ ಬರುತ್ತಿತ್ತು. ಲಾಲ್‌ಬಾಗ್ ಹಾಗೂ ಕುಂಟಿಕಾನ ಕಡೆಗೆ ಹೋಗುವ ರಿಕ್ಷಾಗಳನ್ನು ನಿಲ್ಲಿಸಲಿಲ್ಲ. ಸಾಮಾನ್ಯವಾಗಿ ರಾತ್ರಿ ಗಸ್ತು ತಿರುಗುವಾಗ ಪಂಚರನ್ನು ಕರೆದುಕೊಂಡು ಹೋಗುತ್ತೇವೆ. ತಕ್ಷೀರು ಸ್ಥಳ ಹತ್ತಿರವಿರುವ ಬಸ್ಸು ನಿಲ್ದಾಣದಲ್ಲಿ ಪೊಲೀಸ್ ಔಟ್ ಪೋಸ್ಟ್ ಇರುವುದನ್ನು ಗಮನಿಸಿಲ್ಲ. ರಿಕ್ಷಾವನ್ನು ನಿಲ್ಲಿಸಲು ಸೂಚನೆ ನೀಡಿರುತ್ತೇನೆ. ಚಾಲಕನು ಓಡಿ ಹೋಗಲು ಪ್ರಯತ್ನಿಸಲಿಲ್ಲ. ಸರ್ಚ್ ಮೆಮೋ ತಯಾರಿಸಿ ಮಹಜರಿನೊಂದಿಗೆ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ಮಹಜರನ್ನು ತಾನೇ ಬರೆದಿರುತ್ತೇನೆ. ಪಂಚರಾದ ಹರೀಶ್ ಶೆಟ್ಟಿ ಇವರ ಪರಿಚಯ 6 ತಿಂಗಳ ಮೊದಲೇ ಇದೆ. ಅಕ್ಕಪಕ್ಕದ ಪಂಚ ಸಾಕ್ಷಿದಾರರನ್ನು ಕರೆಯಲು ಪ್ರಯತ್ನ ಪಡಲಿಲ್ಲ. ಸದ್ರಿ ಸ್ಥಳದಲ್ಲಿ ಜನ ಸೇರಿದ್ದ ಬಗ್ಗೆ ನನಗೆ ನೆನಪಿಲ್ಲ. ನಾನು ರಾಸಾಯನಿಕ ಪರೀಕ್ಷೆಗಾಗಿ 180 ಮಿಲಿ ಬಾಟ್ಲಿಗಳಲ್ಲಿ ಮಾದರಿ ತೆಗೆದಿರುತ್ತೇನೆ. ಮೆ: ಜಾಲಿ ವೈನ್ಸ್ ಬಸ್ಸು ನಿಲ್ದಾಣದಿಂದ 10-15 ಗಜ ದೂರದಲ್ಲಿದೆ. ಆ ದಿನ ತಕ್ಷೀರು ಸ್ಥಳಕ್ಕೆ ಹೋಗಿಲ್ಲವೆಂದರೆ ಸರಿಯಲ್ಲ. ಮಹಜರನ್ನು ತನ್ನ ಕಾರ್ಯಾಲಯದಲ್ಲಿ ತಯಾರಿಸಿದ್ದೇನೆಂದರೆ ಸರಿಯಲ್ಲ. ಈ ತಕ್ಷೀರಿಗೂ ಆಟೋರಿಕ್ಷಾಕ್ಕೂ ಯಾವುದೇ ಸಂಬಂಧವಿಲ್ಲವೆಂದರೆ ಸರಿಯಲ್ಲ. ಮಹಜರಿನ ಸಾಕ್ಷಿದಾರ ಹರೀಶ್ ಇವರು ನಮ್ಮ ಹಳೆಯ ಸಾಕ್ಷಿ ಎಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ. ಈ ಪಾಟೀ ಸವಾಲಿನಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ.

**ಪ್ರಾ.ಸಾ: 1**

ಶ್ರೀ ಲಕ್ಷ್ಮಣ ಗೌಡ, ಅಬಕಾರಿ ಉಪ ಅಧೀಕ್ಷಕರು ಅಂದಿನ ಅಬಕಾರಿ ನಿರೀಕ್ಷಕರಾಗಿದ್ದು ಈ ಪ್ರಕರಣದ ತನಿಖಾಧಿಕಾರಿಗಳಾಗಿದ್ದು, ದಿನಾಂಕ: 24.7.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲಾತಿಗಳು, ಮದ್ಯ, ವಾಹನ ಆಟೋರಿಕ್ಷಾ ಸಂಖ್ಯೆ: ಕೆಎ-19ಎ-3392 ಗಳನ್ನು ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ ಇವರಿಂದ ದಿನಾಂಕ: 28.11.2002 ರಂದು ಪಡೆದುಕೊಂಡಿರುತ್ತೇನೆ. ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯದ ಮಾದರಿ ಸೀಸೆಗಳನ್ನು ದಿ: 30-12-2003 ರಂದು ರಾಸಾಯನಿಕ ವಿಶ್ಲೇಷಣೆಗಾಗಿ ಕಛೇರಿಯ ಅಬಕಾರಿ ರಕ್ಷಕರಾದ ಮೋಹನ್ ಕುಮಾರ್ ಇವರ ಮೂಲಕ ಕಳುಹಿಸಿಕೊಡಲಾಗಿದ್ದು, ಇದಕ್ಕೆ ಸಂಬಂಧಿಸಿದ ವರದಿ ದಿನಾಂಕ: 13-3-2003 ರಂದು ಸ್ವೀಕೃತವಾಯಿತು. ಸದ್ರಿ ವರದಿಯನ್ನು ಈಗ ನೋಡಿದೆನು. ಅದರ ಛಾಯಾ ಪ್ರತಿಯನ್ನು ನಿಶಾನೆ ಪಿ-1 ಎಂದು ಗುರುತಿಸಲಾಯಿತು. ತನಗೆ ವರ್ಗಾವಣೆಯಾದ ಪ್ರಯುಕ್ತ ಪ್ರಕರಣವನ್ನು ಹಸ್ತಾಂತರಿಸಿರುತ್ತೇನೆ. ಈ ಪ್ರಕರಣದ ಪ್ರಥಮ ಮಾಹಿತಿ ವರದಿ ಹಾಗೂ ಮಹಜರಿನ ಛಾಯಾ ಪ್ರತಿಯನ್ನು ನೋಡಿದೆನು. ಅವುಗಳನ್ನು ಕ್ರಮವಾಗಿ ನಿಶಾನೆ ಪಿ-2 ಮತ್ತು ನಿಶಾನೆ ಪಿ-3 ಎಂದು ಗುರುತಿಸಲಾಯಿತು.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಈ ಪ್ರಕರಣದಲ್ಲಿ ಯಾವುದೇ ಸಾಕ್ಷಿಗಳ ಹೇಳಿಕೆ ಪಡೆದುಕೊಂಡಿರುವುದಿಲ್ಲ. ಈ ಪ್ರಕರಣದಲ್ಲಿ ಯಾವುದೇ ಮದ್ಯವನ್ನು ವಶಪಡಿಸಿಕೊಳ್ಳಲಾಗಿಲ್ಲವೆಂದರೆ ಸರಿಯಲ್ಲ. ಈ ಪ್ರಕರಣದಲ್ಲಿ ರಾಸಾಯನಿಕ ವಿಶ್ಲೇಷಣೆಗೆ ಬೇರೆ ಪ್ರಕರಣಗಳಿಗೆ ವಶಪಡಿಸಿಕೊಂಡಿರುವ ಮದ್ಯದಿಂದ ತಯಾರಿಸಿ ಕಳುಹಿಸಿದೆ ಎಂದರೆ ಸರಿಯಲ್ಲ ಎಂದು ತಮ್ಮ ಸಾಕ್ಷಿ ನೀಡಿರುತ್ತಾರೆ. ಈ ಪಾಟೀ ಸವಾಲಿನಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ.

**ಪ್ರಾ.ಸಾ-3:**

ಶ್ರೀ ಮೋಹನ್ ಕುಮಾರ್, ಅಬಕಾರಿ ರಕ್ಷಕರು, ಹಂಪನಕಟ್ಟೆ ವಲಯ ಇವರು ದಿನಾಂಕ: 11.3.2004 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತನ್ನ ಸಾಕ್ಷಿ ನೀಡಿರುತ್ತಾರೆ. ತಾನು ದಿನಾಂಕ: 30.1.2003 ರಂದು ಹಂಪನಕಟ್ಟೆ ವಲಯ ಅಬಕಾರಿ ನಿರೀಕ್ಷಕರಿಂದ 750 ಮಿಲಿಯ 4 ಶೀಷೆಗಳನ್ನು ಮತ್ತು ಕೋರಿಕೆ ಪತ್ರವನ್ನು ಪಡೆದುಕೊಂಡು ರಾಸಾಯನಿಕ ತಜ್ಞರಿಗೆ ತಲುಪಿಸಿರುತ್ತೇನೆ. ದಿನಾಂಕ: 13.3.2003 ರಂದು ರಾಸಾಯನಿಕ ತಜ್ಞರು ಪರೀಕ್ಷಿಸಿದ 4 ಮಾದರಿ ಸೀಸೆಗಳನ್ನು ಮತ್ತು ವರದಿಯನ್ನು ಪಡೆದುಕೊಂಡು ಅಬಕಾರಿ ನಿರೀಕ್ಷಕರಿಗೆ ತಲುಪಿಸಿರುತ್ತೇನೆ. ಸದ್ರಿ ಮಾದರಿ ಶೀಷೆಗಳನ್ನು ನೋಡಿದರೆ ಗುರುತಿಸುತ್ತೇನೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಸದ್ರಿ ದಿನ ರಾಸಾಯನಿಕ ತಜ್ಞರಿಗೆ ಕೊಂಡೊಯ್ದ ಮಾದರಿ ಶೀಷೆಗಳು ಈ ಪ್ರಕರಣಕ್ಕೆ ಸಂಬಂಧಿಸಿದ್ದಲ್ಲ ಎಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ.

ಪ್ರಾ.ಸಾ.1, 2 ಮತ್ತು 3 ನೀಡಿರುವ ಸಾಕ್ಷಿಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ: 13.11.2002 ರಂದು ಈ ಪ್ರಕರಣದಲ್ಲಿ ಜಪ್ತಿಪಡಿಸಲಾಗಿರುವ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಣೆಯಾಗಿರುವುದು ಸ್ಪಷ್ಟವಾಗಿರುವುದರಿಂದ ಮೊದಲನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

**ಡಿ.ಡಬ್ಲ್ಯೂ-1**

ಅರುಣ್ ವೇಗಸ್, ಬಿನ್: ಸೆಬೆಸ್ಟಿಯನ್ ವೇಗಸ್ ಇವರು ಈ ಪ್ರಕರಣದಲ್ಲಿ ಜಪ್ತಿಪಡಿಸಲಾಗಿರುವ ವಾಹನದ ಮಾಲೀಕರಾಗಿದ್ದು, ದಿನಾಂಕ: 10.6.2004 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ಕೆಎ-19ಎ-3392 ಸಂಖ್ಯೆ ವಾಹನದ ಮಾಲೀಕನಾಗಿರುತ್ತೇನೆ. ಸದ್ರಿ ಆಟೋರಿಕ್ಷಾವನ್ನು ತಾನೇ ಚಲಾಯಿಸುತ್ತೇನೆ. ಸದ್ರಿ ರಿಕ್ಷಾವನ್ನು ಬ್ಯಾಂಕ್ ಸಾಲ ಮಾಡಿ ಪಡೆದಿರುತ್ತೇನೆ. ರಿಕ್ಷಾವನ್ನು ಬಾಡಿಗೆಗೆ ಚಲಾಯಿಸುತ್ತೇನೆ. ದಿನಾಂಕ: 13.11.2002ರ ಬೆಳಿಗ್ಗೆ 5.20ರ ಸಮಯ ಕೆ.ಎಸ್.ಆರ್.ಟಿ.ಸಿ. ಪಾರ್ಕ್‌ನಲ್ಲಿ ರಿಕ್ಷಾ ನಿಲ್ಲಿಸಿದ್ದೆ. ಆ ಸಮಯ ಒಬ್ಬನು ಬಂದು ಕದ್ರಿ ಹಿಲ್ಸ್‌ಗೆ ಕರೆದುಕೊಂಡು ಹೋಗಲು ಹೇಳಿದ. ಆತನನ್ನು ಕುಳಿತುಕೊಳ್ಳಲು ಹೇಳಿದಾಗ ಅವನು ರಿಕ್ಷಾದಲ್ಲಿ ಲಗ್ಗೇಜನ್ನು ಇಟ್ಟನು. ಅಲ್ಲಿಂದ ಕದ್ರಿ ಹಿಲ್ಸ್‌ಗೆ ಹೋಗುವಾಗ ಅಬಕಾರಿ ಅಧಿಕಾರಿಗಳು ತಡೆದು ನಿಲ್ಲಿಸಿದರು. ತಾನು ರಿಕ್ಷಾ ನಿಲ್ಲಿಸಿದಾಗ ರಿಕ್ಷಾದಲ್ಲಿದ್ದ ಪ್ರಯಾಣಿಕರ ಲಗ್ಗೇಜು ನೋಡಿದರು. ಅದರಲ್ಲಿ ಲಿಕ್ಕರ್ ಇದೆ ಎಂದು ನನ್ನನ್ನು ಕಛೇರಿಗೆ ಕರೆದರು. ಆ ಮೇಲೆ ನನ್ನ ಮೇಲೆ ಕೇಸು ಹಾಕಿದರು. ಪ್ರಯಾಣಿಕರ ಸದ್ರಿ ಲಗ್ಗೇಜಿನಲ್ಲಿ ಏನಿದೆ ಎಂದು ನನಗೆ ತಿಳಿದಿರಲಿಲ್ಲ. ಸದ್ರಿ ತಕ್ಷೀರಿಗೂ ನನ್ನ ವಾಹನಕ್ಕೂ ಸಂಬಂಧ ಇಲ್ಲ. ಸದ್ರಿ ತಕ್ಷೀರಿನಲ್ಲಿ ಯಾವುದೇ ರೀತಿಯಲ್ಲಿ ನಾನು ಭಾಗಿಯಾಗಿರುವುದಿಲ್ಲ. ಆದ ಕಾರಣ ಆಟೋರಿಕ್ಷಾವನ್ನು ನನಗೆ ಬಿಟ್ಟುಕೊಡಬೇಕೆಂದು ಪ್ರಾರ್ಥಿಸುತ್ತೇನೆ ಎಂದು ತನ್ನ ಸಾಕ್ಷಿ ನೀಡಿರುತ್ತಾರೆ.

ಸರಕಾರದ ಅಭಿಯೋಜನ ಪರ ಸಹಾಯಕ ಅಭಿಯೋಜನ ನಿರ್ದೇಶಕರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಆ ದಿನ ನನ್ನ ವಾಹನದಲ್ಲಿ ಪ್ರಯಾಣಿಸಿದ ವ್ಯಕ್ತಿ ಹೆಸರು ಜೊಸ್ಸಿ ಮೊಂತೆರೊ, ಆತನ ಹೆಸರು ಪೊಲೀಸ್ ಠಾಣೆಗೆ ಹೋದ ನಂತರ ತಿಳಿಯಿತು. ನಾನು ಅರ್ಜಿಯಲ್ಲಿ ಬರೆದ ವಿಷಯ ಸರಿಯಿರುತ್ತದೆ. ಸದ್ರಿ ಪ್ರಯಾಣಿಕ ಜೊಸ್ಸಿ ಮೊಂತೆರೊ ಇವರು ನನಗೆ ಮೊದಲಿನಿಂದ ಪರಿಚಯವೆಂದರೆ ಸರಿಯಲ್ಲ. ಸದ್ರಿ ದಿನದಂದು ನನ್ನ ವಾಹನದಲ್ಲಿ ಸಾರಾಯಿ ಇದ್ದುದು ನನಗೆ ಗೊತ್ತಿತ್ತು ಎಂದರೆ ಸರಿಯಲ್ಲ. ನಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ತನ್ನ ಸಾಕ್ಷಿ ನೀಡಿರುತ್ತಾರೆ.

ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಣೆ ತನ್ನ ತಿಳುವಳಿಕೆಗೆ ಬಾರದೇ ನಡೆದಿರುತ್ತದೆ ಎಂದು ಸಾಬೀತುಪಡಿಸುವುದು, ಈ ರೀತಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಣೆಯಾಗದಿರುವಂತೆ ಎಲ್ಲಾ ರೀತಿಯ ಮುನ್ನೆಚ್ಚರಿಕೆ ಕ್ರಮವನ್ನು ತೆಗೆದುಕೊಳ್ಳುವುದು ವಾಹನ ಮಾಲೀಕರ ಆದ್ಯ ಕರ್ತವ್ಯವಾಗಿದ್ದು, ವಾಹನ ಮಾಲೀಕರು ಈ ನಿಟ್ಟಿನಲ್ಲಿ ಯಾವುದೇ ಮುನ್ನೆಚ್ಚರಿಕೆಯನ್ನು ತೆಗೆದುಕೊಳ್ಳಲು ವಿಫಲರಾಗಿರುತ್ತಾರೆ. ಸ್ವತಃ ತಾವೇ ವಾಹನದ ಚಾಲಕರಾಗಿದ್ದು ಅಕ್ರಮ ಕಳ್ಳಭಟ್ಟಿ ಸಾರಾಯಿಯನ್ನು ಸಾಗಣೆ ಮಾಡಿರುತ್ತಾರೆ. ತಾವು ಮಧ್ಯಂತರ ಬಿಡುಗಡೆಗೆ ಸಲ್ಲಿಸಲಾಗಿರುವ ಅರ್ಜಿಯಲ್ಲಿ ಆ ದಿನ ಬಂದ ಪ್ರಯಾಣಿಕರು ಬೆಂಗಳೂರಿನಿಂದ ಬಂದವರಾಗಿದ್ದು, ಆತನು ತಂದಿರುವ ಲಗ್ಗೇಜಿನ ಬಗ್ಗೆ ತನಗೆ ತಿಳಿದಿರುವುದಿಲ್ಲವೆಂದು ತಿಳಿಸಿರುತ್ತಾರೆ. ಆದರೆ ಪ್ರಯಾಣಿಕರ ಲಗ್ಗೇಜಿನ ಬಗ್ಗೆ ಸಹಾ ಬಾಡಿಗೆಯನ್ನು ನಿಗದಿಪಡಿಸುವ ಹವ್ಯಾಸ ವಾಹನ ಚಾಲಕರಿಗೆ ಸಾಮಾನ್ಯವಾಗಿ ಇದ್ದು, ಪ್ರಯಾಣಿಕರ ಲಗ್ಗೇಜಿನ ಬಗ್ಗೆ ವಿಚಾರ ಮಾಡುವುದು ವಾಹನ ಚಾಲಕರ ಕರ್ತವ್ಯವಾಗಿದ್ದು, ಆಟೋರಿಕ್ಷಾದಲ್ಲಿ ಯಾವುದೇ ಮುಚ್ಚಿಗೆಯಿಲ್ಲದೆ 4 ದೊಡ್ಡ ದೊಡ್ಡ ಕಪ್ಪು ಬಣ್ಣದ ರಬ್ಬರು ಟ್ಯೂಬುಗಳನ್ನು ಪ್ರಯಾಣಿಕರು ಕುಳಿತುಕೊಳ್ಳುವ ಸ್ಥಳದಲ್ಲಿ ತುಂಬಿಸಿ ಪ್ರಯಾಣಿಕರನ್ನು ತನ್ನ ಅಂದರೆ ಚಾಲಕನ ಸೀಟಿನಲ್ಲಿ ಕೂರಿಸಿಕೊಳ್ಳಬೇಕಾದರೆ ಸದ್ರಿ ಲಗ್ಗೇಜಿನ ಬಗ್ಗೆ ಮಾಹಿತಿ ಇರಲೇಬೇಕೆಂದು ನಂಬಬೇಕಾಗುತ್ತದೆ. ಪ್ರಯಾಣಿಕರಾದ ಜೊಸ್ಸಿ ಮೊಂತೆರೊ ಇವರು ಪೆರ್ಮನ್ನೂರು ಗ್ರಾಮದ ಅಡಂಕುದ್ರು ಹೊಸಪಡ್ಪುವಿನ ನಿವಾಸಿ ಎಂದು ಈ ತಕ್ಷೀರು ಪತ್ತೆಯಾದ ಸಮಯದಲ್ಲಿ ವಿಚಾರಣೆಯಲ್ಲಿ ತಿಳಿದು ಬಂದಿರುತ್ತದೆ. ಅಲ್ಲದೆ ಪ್ರಯಾಣಿಕರು ಚಾಲಕನ ವಾಸ ಸ್ಥಳದ ಪಕ್ಕದ ಗ್ರಾಮದವರೇ ಆಗಿದ್ದು, ಅವರ ಗುರುತು ಪರಿಚಯವಿದ್ದರೂ ಪ್ರಯಾಣಿಕರು ಕದ್ರಿ ಹಿಲ್ಸ್‌ನ ನಿವಾಸಿ ಎಂದು ತಮ್ಮ ಅರ್ಜಿಯಲ್ಲಿ ತಿಳಿಸಿರುತ್ತಾರೆ. ಆತನ ಪರಿಚಯ ಈ ಮೊದಲು ಇರಲಿಲ್ಲವೆಂದು ಪ್ರಾಧಿಕಾರದ ಮುಂದೆ ಸಾಕ್ಷಿ ನೀಡಿರುತ್ತಾರೆ. ಇದು ಅಪ್ಪಟ ಸುಳ್ಳಿನ ಸಂಗತಿಯಾಗಿದ್ದು ಅಲ್ಲದೆ, ಸ್ವತಃ ಸೃಷ್ಟಿ ಮಾಡಿರುವ ಕಟ್ಟುಕಥೆಯಾಗಿರುತ್ತದೆ. ತಾವು ವಾಹನ ಮಾಲೀಕರಾಗಿದ್ದು ತಾವೇ ಸ್ವತಃ ವಾಹನವನ್ನು ಚಲಾಯಿಸುತ್ತಿದ್ದು, ಈ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಣೆಯಲ್ಲಿ ಭಾಗಿಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಈ ಕಾರಣದಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಮೇಲಿನ ಕಾರಣಗಳಿಂದ ಹಾಗೂ ಲಭ್ಯವಿರುವ ಸಾಕ್ಷ್ಯಾಧಾರ ಹಾಗೂ ದಾಖಲಾತಿಗಳ ಆಧಾರದಿಂದ ಈ ಪ್ರಕರಣದಲ್ಲಿ ಜಪ್ತಿಪಡಿಸಲಾಗಿರುವ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ:304:ಡಿಟಿಸಿಆರ್:2002-2003, ದಿನಾಂಕ: 28ನೇ ಅಕ್ಟೋಬರ್ 2004**

ಗೋವಿಂದಪ್ಪ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು 1965ನೇ ಕರ್ನಾಟಕ ಅಬಕಾರಿ ಅಧಿನಿಯಮ ಕಲಂ 43(ಎ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ ಇವರ ಮೊಕದ್ದಮೆ ಸಂಖ್ಯೆ:30/2002-03 ದಿನಾಂಕ:13-11-2002ರಲ್ಲಿ ಜಪ್ತಿಪಡಿಸಿರುವ ವಾಹನ ಬಜಾಜ್ ಆಟೋರಿಕ್ಷಾ ಸಂಖ್ಯೆ: ಕೆಎ-19ಎ-3392ನ್ನು ನಿಯಮ 43ಎ (2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 28-10-2004 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.:1 - ಶ್ರೀ ಲಕ್ಷ್ಮಣಗೌಡ, ಅಬಕಾರಿ ಉಪ ಅಧೀಕ್ಷಕರು.

ಪ್ರಾ.ಸಾ.:2 - ಶ್ರೀ ಜಾರ್ಜ್ ಪಿಂಟೊ, ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರು.

ಪ್ರಾ.ಸಾ.:3 - ಶ್ರೀ ಮೋಹನ್ ಕುಮಾರ್, ಅಬಕಾರಿ ರಕ್ಷಕರು, ಹಂಪನಕಟ್ಟೆ ವಲಯ.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ರಾಸಾಯನಿಕ ವಿಶ್ಲೇಷಕರ ವರದಿ ಪ್ರತಿ.

ನಿಶಾನೆ ಪಿ-2 - ಪ್ರಥಮ ಮಾಹಿತಿ ವರದಿಯ ಪ್ರತಿ.

ನಿಶಾನೆ ಪಿ-3 - ಮಹಜರಿನ ಪ್ರತಿ

ನಿಶಾನೆ ಪಿ-4 - ಅಧಿಕೃತ ಅಧಿಕಾರಿಯವರಿಗೆ ಸಲ್ಲಿಸಲಾಗಿದ್ದ ವರದಿಯ ಪ್ರತಿ.

**ಅನುಬಂಧ-3**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

**ಅರ್ಜಿದಾರರ ಹೇಳಿಕೆ:**

ಡಿ.ಡಬ್ಲ್ಯೂ-1: ಅರುಣ್ ವೇಗಸ್, ಬಿನ್: ಸೆಬೆಸ್ಟಿಯನ್ ವೇಗಸ್ (ಪ್ರಾಯ 24 ವರ್ಷ), ಕೊಲ್ಯ ಮನೆ, ಕುಲಾಲ್ ಮಂದಿರ ಹತ್ತಿರ, ಕೋಟೆಕಾರ್ ಅಂಚೆ, ಮಂಗಳೂರು.

**ಅನುಬಂಧ-4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:**

-ಯಾವುದೂ ಇರುವುದಿಲ್ಲ-

ಪಿ.ಆರ್. 1536 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ**

**ಫಿರ್ಯಾದುದಾರರು:** **ವಿರುದ್ಧ** **ಪ್ರತಿವಾದಿಗಳು:**

ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೊಲೀಸ್ ಠಾಣೆ, ಕೆ.ಆರ್. ಪೇಟೆ.

1) ಚಂದ್ರು ಬಿನ್ ಅಣ್ಣೇಗೌಡ, ಕಾಶಿ ಮುರುಕನಹಳ್ಳಿ ಗ್ರಾಮ ಕೆ.ಆರ್. ಪೇಟೆ.

ದಿನಾಂಕ:23.7.2003 ರಂದು ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೊಲೀಸ್ ಠಾಣೆ, ಕೆ.ಆರ್. ಪೇಟೆರವರು ಕೆ.ಆರ್. ಪೇಟೆ ತಾಲ್ಲೂಕಿನ ಕಾಶಿಮುರುಕನಹಳ್ಳಿ ಗ್ರಾಮದಲ್ಲಿ ಆರೋಪಿಗೆ ಸೇರಿದ ವಾಸದ ಮನೆಯಲ್ಲಿ ಅಕ್ರಮವಾಗಿ ಸಾರಾಯಿ ತಯಾರು ಮಾಡಲು ಅಗತ್ಯವಾದ ವಸ್ತುಗಳನ್ನು 25.000 ಲೀಟರ್ ಸ್ಪಿರಿಟ್ ಇರುವ ನೀಲಿ ಬಣ್ಣದ ಪ್ಲಾಸ್ಟಿಕ್ ಕ್ಯಾನ್‌ಗಳು ಇವುಗಳನ್ನು ಸಾಗಾಣಿಕೆ ಮಾಡಲು ವಾಹನ ಬಜಾಜ್ ಸ್ಕೂಟರ್ (ಸಂಖ್ಯೆ ಇರುವುದಿಲ್ಲ)ನ್ನು ವಶಪಡಿಸಿಕೊಂಡು ಪ್ರಕರಣ ಸಂಖ್ಯೆ: 105/2003 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 33, 34, 38(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ಏತನ್ಮಧ್ಯೆ, ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ಮುಂದಿನ ಕ್ರಮ ಕೈಗೊಳ್ಳಲು ಸದರಿ ವಾಹನದ ಮಾಲೀಕರು ಯಾರಾದರೂ ಇದ್ದಲ್ಲಿ, ವಾಹನ ಮತ್ತು ಮದ್ಯವನ್ನು ತಮ್ಮದೆಂದು ಹಕ್ಕು ಚಲಾಯಿಸಲು ಅವಕಾಶ ನೀಡುವ ಸಲುವಾಗಿ ದಿನಾಂಕ: 19.1.2004 ರಂದು ಒಂದು ವಿವರವಾದ ಪ್ರಕಟಣೆಯನ್ನು ಹೊರಡಿಸಿದ್ದು, ದಿನಾಂಕ: 24.1.2004 ರಂದು ಸದರಿ ಪ್ರಕಟಣೆಯನ್ನು ಪ್ರಚಲಿತ ದಿನಪತ್ರಿಕೆಗಳಾದ ಸಂಯುಕ್ತ ಕರ್ನಾಟಕ ಮತ್ತು ಆಂದೋಲನಾ ದಿನ ಪತ್ರಿಕೆಯಲ್ಲಿ ಪ್ರಚಾರಪಡಿಸಿದ್ದು, ವಾಹನವು ಯಾರಿಗೆ ಸೇರಿದೆಯೋ ಅಂಥಹವರು ಪ್ರಕಟಣೆಯಾದ (7) ದಿನಗಳೊಳಗಾಗಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಬೀತುಪಡಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಯಾರೊಬ್ಬರೂ ಹಕ್ಕನ್ನು ಚಲಾಯಿಸದಿದ್ದಲ್ಲಿ, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದಾಗಿ ಪ್ರಕಟಣೆಯನ್ನು ಸಹ ತಿಳಿಸಲಾಗಿತ್ತು.

ಅಬಕಾರಿ ನಿರೀಕ್ಷಕರು, ಕೆ.ಆರ್. ಪೇಟೆ ವಲಯ-ರವರು ದಿನಾಂಕ:21.4.2004 ರಂದು ವರದಿಯನ್ನು ಸಲ್ಲಿಸಿ, ವಾಹನ ಮತ್ತು ಅಬಕಾರಿ ವಸ್ತುಗಳು ತಮ್ಮದೆಂದು ಈವರೆವಿಗೂ ಯಾರೊಬ್ಬರೂ ಹಕ್ಕನ್ನು ಚಲಾಯಿಸಲು ಮುಂದೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ವಾಹನ ಮತ್ತು ಅಬಕಾರಿ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಕರಣದ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಶಪಡಿಸಿಕೊಂಡ ವಾಹನದಲ್ಲಿ ಯಾವುದೇ ಪರವಾನಗಿ ಇಲ್ಲದೆ ಅಕ್ರಮವಾಗಿ 25.000 ಲೀ. ಸ್ಪಿರಿಟ್ ಅನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಕಂಡು ಬಂದಿರುತ್ತದೆ. ಈ ಬಗ್ಗೆ ಪ್ರತಿವಾದಿಯು ನಿರಾಕರಿಸಿರುವುದಿಲ್ಲ, ಮೊಕದ್ದಮೆ ದಾಖಲಾಗಿ ಸುಮಾರು ಒಂದು (1) ವರ್ಷ ಕಳೆದರೂ, ವಾಹನ ಬಿಡುಗಡೆಗಾಗಿ ಯಾವುದೇ ಪ್ರಯತ್ನ ಪ್ರತಿವಾದಿಗಳ ಕಡೆಯಿಂದ ನಡೆದಿರುವುದಿಲ್ಲ. ವಾಹನದ ಮಾಲೀಕತ್ವ ನಿರೂಪಿಸಲು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪ್ರಕಟಣೆಯಾಗಿ ಏಳು (7) ದಿನ ಕಳೆದರೂ ಸಂಬಂಧಪಟ್ಟವರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಈ ಕಾರಣಗಳಿಂದ ವಾಹನ ಬಿಡುಗಡೆಗಾಗಿ ಯಾರೊಬ್ಬರೂ ಮುಂದೆ ಬರುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಇನ್ನು ಮುಂದೆ ಕಾಲಾವಕಾಶ ನೀಡುವುದು ಅನವಶ್ಯಕವೆಂದು ಪರಿಗಣಿಸಿ ಕರ್ನಾಟಕ ಅಬ್ಕಾರಿ ಕಾಯಿದೆ ಕಲಂ 43(ಎ) ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/94/03-04, ದಿನಾಂಕ: 7ನೇ ಅಕ್ಟೋಬರ್ 2004**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೊಲೀಸ್ ಠಾಣೆ, ಕೆ.ಆರ್. ಪೇಟೆ ರವರ ಪ್ರ.ಮಾ.ವ. ಸಂಖ್ಯೆ: 105/2003, ದಿನಾಂಕ: 23.7.2003 ರಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಸ್ಕೂಟರ್ (ಸಂಖ್ಯೆ : ಇರುವುದಿಲ್ಲ) - ನ್ನು ಮತ್ತು ಮದ್ಯಸಾರವನ್ನು (ಸ್ಯಾಂಪಲ್ ಬಾಟಲ್ ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಪಿ.ಆರ್. 1537 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**PROCEEDINGS OF THE ASST. REGISTRAR OF CO-OPERATIVE SOCIETIES, I CIRCLE, CHAMARAJPET, BANGALORE-560 018**

**Sub:** Regarding sale confirmation of immovable property of Sri D. Nanjappa Residing at No. 477, 9th Cross, Mathikere, Bangalore-54 Relating to C.E.P. No. ARBI/CEP/99-00 in favour of Sri M. Shakthi S/o Sri Muniswamy, Residing at No.34/81, 9th Main, Kaverinagar, B.S.K. 2nd Stage, Bangalore-560 070.

**Ref:** ARB I/CONFIRMATION/ 4 /04-05 dated 23.9.2004 and Sale proceedings date 31.7.2004 of the Sale officer of the Janatha Co-Operative Bank Ltd., Bangalore-55

**Preamble:-**

Sri D. Nanjappa S/o Late Devaiah Residing at No.477, 9th Cross, 13th Main, Mathikere, Bangalore-54 have borrowed loan from the Janatha Co-operative Bank Ltd., Malleswaram Branch, and the Judgement debtor Sri D. Nanjappa have failed to repay the loan amount to the petitioner bank in time, consequent of which a decree bearing award No. DRBI/DIS/522/98-99 dated 6.10.1998 for Rs. 1,12,383/- as on 1.7.1998 plus further interest at the rate of 17.5% and over due interest at the rate of 2% and other cost obtained against Sri D. Nanjappa. In this connection execution petition was filed for execution of decree against the immovable property mortgaged by Sri D. Nanjappa at Residing at No. 477, 9th Cross, 13th Main, Mathikere, Bangalore-54 was brought for sale and public auction on 31.7.2004 by the sale officer of the Janatha Co-Operative Bank Ltd., Malleswaram, Bangalore-55 and immovable property was sold in public auction for Rs.1,88,000/- in favour of Sri M. Shakthi S/o Sri Muniswamy, Residing at

